# ನವೀನ ನಾಟಕಗಳು

ಲೇಖಕ:

ಶಿವರಾಮ ಕಾರಂತ

**1946**

ಪ್ರಕಾಶಕರು:

**ಶಿವರಾಮ ಕಾರಂತ**

ಹರ್ಷ ಮುದ್ರಣ, ಪ್ರಕಟಣಾಲಯ.

ಪುತ್ತೂರು.

ಬೆಲೆ ರೂ ೧||

# ಪ್ರಸ್ತಾವನೆ

ಈ 'ನವೀನ ನಾಟಕಗಳು' ಕನ್ನಡ ರಂಗಭೂಮಿಗೆ ನಾನು ಸಲಿಸುತ್ತಿರುವ ಎರಡನೆಯ ಕಾಣಿಕೆ. ಕೆಲವು ದಿನಗಳ ಹಿಂದೆ, ನನ್ನ ಒಂಬತ್ತು ಗೀತ ನಾಟಕಗಳನ್ನು ಪುಸ್ತಕ ರೂಪದಲ್ಲಿ ಸಲಿಸುವ ಯೋಗ ನನಗೊದಗಿತು. ಈಗ ಈ ಹೊತ್ತಗೆಯನ್ನು ತಮ್ಮ ಮುಂದಿರಿಸುತ್ತಿದ್ದೇನೆ. ಇವು ನನ್ನ ಇತರ ಕೆಲವು ನಾಟಕ ಪ್ರಯೋಗಗಳ ಸಂಗ್ರಹ. ಇದರಲ್ಲಿರುವ ಐದು ನಾಟಕಗಳಲ್ಲಿ ಮೂರು—ದೇವಿ ದೇಹಿ (1935), ರಕ್ತಕಾಣಿಕೆ (1931), ಹಿರಿಯ ದೇವರು (1936) ಛಾಯಾ ನಾಟಕಗಳು. ಉಳಿದೆರಡು—ಇಸ್ಪಿಟು ಗುಲಾಮು (1940) ಮತ್ತು ಗೆದ್ದವರ ಸತ್ಯ (1945) ಅಣಕವಾಡಗಳು (Mimes.)

ಛಾಯಾ ನಾಟಕದಲ್ಲಿ—ರಂಗಮಂಟಪದ ಮುಂದೆ ಬಿಗಿದಿರುವುದು-ಬಿಳಿಯ ಇಲ್ಲವೆ ತುಸು ಬಣ್ಣದ ಛಾಯೆಯುಳ್ಳ ಪರದೆ. ನಟರ ನಲಿದಾಟ ಅದರ ಹಿಂದೆ. ಅವರ ನೆರಳು ಮಾತ್ರ ತೆರೆಯ ಮೇಲೆ ಕಾಣಿಸುತ್ತಿದ್ದು—ಪಾತ್ರದ ಯೋಗ್ಯತೆಗೆ ಸಮನಾಗಿ ಅವು ಹಿರಿಯುವಾಗಿ, ಕಿರಿಯುವಾಗಿ ಇಲ್ಲವೆ ಸಮವಾಗಿ ಪ್ರದರ್ಶಿತವಾಗುವುವು. ಅತಿ ಮಾನುಷ, ಅಮಾನುಷ ವ್ಯಕ್ತಿ ಚಿತ್ರಣಕ್ಕೆ ಇದು ಪರಿಣಾಮಕಾರಿಯಾದ ದಾರಿ. ಅಲ್ಲದೆ ನಟರ ಚಲನೆಯನ್ನು ತೆರೆಗೆ ಸಮಾನಾಂತರವಾಗಿ ಹೆರಿಸಿದರೆ ಒಂದು ಬಗೆಯ ಪರಿಣಾಮವಿದೆ, ಬದಲು ಕರ್ಣವಾಗಿ (Diagonal) ಇರಿಸಿಕೊಂಡರೆ—ಗೊಂಬೆಗಳು ದೊಡ್ಡವಾಗುತ್ತ ಬರುವಂತೆ ಇಲ್ಲವೆ ಸಣ್ಣದಾಗುತ್ತ ಬರುವಂತೆ ಮಾಡುವ ಹೆಚ್ಚಿನ ಅನುಕೂಲತೆಯಿದೆ.

ರಕ್ತಕಾಣಿಕೆಯಲ್ಲೂ, ಹಿರಿಯ ದೇವರಲ್ಲೂ ಈ ಅನುಕೂಲತೆಗಳು ಅವಶ್ಯ. ಅಲ್ಲದೆ ರಕ್ತಕಾಣಿಕೆಯಲ್ಲಿನ ಪಾತ್ರವರ್ಗದಲ್ಲಿ ಮನುಷ್ಯರ ಜತೆಗೆ ನಿಸರ್ಗ, ಕಳೇ ಬರ ಇಂಥ ಹಿನ್ನಲೆಯ ಸಾಧನೆಗಳಿವೆ. ಹಿರಿಯ ದೇವರಲ್ಲಿ ಅತಿ ಮಾನುಷ ವ್ಯಕ್ತಿಗಳ ಚಿತ್ರಣವಿದೆ. ಈ ಮೂರು ನಾಟಕಗಳೂ ಸಂಕೇತವಾಗಿ—ಮಾನವ ಕುಲದ ಭಿನ್ನ ಭಿನ್ನ ಸಮಸ್ಯೆಗಳನ್ನು ನಮ್ಮೆದುರು ತಂದಿರಿಸಲು ಯತ್ನಿಸುತ್ತಿವೆ. ರಕ್ತ ಕಾಣಿಕೆಯಲ್ಲಿ—ಆರ್ಥಿಕ ಅಸ

ಸಮಾನತೆ, ಶ್ರೀಮಂತರು **ಬಡವರನ್ನು** ಹಿಂಡುವ ವಿಧಾನವನ್ನು ಉಪಮೆಯಿಂದ ಇಲ್ಲಿ ಚಿತ್ರಿಸಿದ್ದೇನೆ. ಅಲ್ಲದೆ ಸಮಾಜ ಶರೀರವು, ತನ್ನಲ್ಲಿ ಹುಟ್ಟುವ ವಿಷದಿಂದಲೇ ಪ್ರತಿವಿಷವನ್ನು ಪಡೆದು ಹೇಗೆ ನಿರ್ಮೂಲನಾಗುತ್ತದೆ— ಎಂಬುದನ್ನು ತರ್ಕಿಸಿದ್ದೇನೆ.

‘ಹಿರಿಯ ದೇವ’ರಲ್ಲಿ ಮಾನವನ ಭೀತಿಯು ಹೇಗೆ ದೇವರನ್ನು ಸೃಜಿಸಿತೆಂದು ತೋರಿಸಿದೆ. ಅಲ್ಲಿನ ಅಮರ— ಮನುಷ್ಯ ವೃಕ್ಷದ ಅನಂತ ವ್ಯಕ್ತಿ. ಅಬಲೆ-ಅದೇ ಬಳ್ಳಿಯ ಅನಂತ ಭೀತಿ ರೂಪ. ಪೂಜಾರ್ಯ— ಮಾನವ ಕುಲದ ಮನೋದೌರ್ಬಲ್ಯವನ್ನು ಸ್ವಲಾಭಕ್ಕಾಗಿ ಬಳಸುವ ಕಾರ್ಯಾವಧಾನಿ. ಶಿಲ್ಪಿ—ಮಾನವನ ಮನಸ್ಸು, ದೇವರನ್ನು ನಿರ್ಮಿಸುವ ಪ್ರೇರಣೆ.

ಒಮ್ಮೆ ನಾನು ಈ ಬರಹವನ್ನು ಒಂದು ಪತ್ರಿಕೆಯ ಹಿರಿಯ ಸಂಪಾದಕರಿಗೆ ಮುದ್ರಿಸಲು ಕಳುಹಿಸಿದಾಗ—ಅವರು—ನಮ್ಮ ಜನಕ್ಕೆ ಇದು ತೀರ ಪುರೋಗಾಮಿಯಾದೀತೆಂದರು. ಪ್ರಾಯಶಃ ದಾಕ್ಷಿಣ್ಯಪರರಾದ ಅವರು ಈ ಬರಹ ಚೆನ್ನಾಗಿಲ್ಲ ಎಂಬುದರ ಬದಲು ಹಾಗೆ ಸೂಚಿಸಿದರೋ ತಿಳಿಯೆ. ಅಂತು-ಈಗ ಅದನ್ನು ದುಡುಕಿ ತಮ್ಮ ಮುಂದೆ ಇರಿಸುತ್ತಿದ್ದೇನೆ. ದೈವತ್ವವನ್ನು ಕುರಿತು ತಮ್ಮ ಮನಸ್ಸು ವಿಚಾರಕ್ಕೆ ಕೆರಳಬೇಕೆಂಬುದೇ ನನ್ನ ಹೇತು.

ಮೂರನೆಯದಾದ-‘ದೇವಿ-ದೇಹಿ’ ಸ್ತ್ರೀ ಪುರುಷ ಬಾಂಧವ್ಯದಲ್ಲಿನ ಕಾಲಾಂತರದ ಪ್ರಶ್ನೆ. ಒಂದು ಕಾಲದಲ್ಲಿ ಆಕೆಯು “ಯತ್ರ ನಾರ್ಯಸ್ತು ಪೂಜ್ಯಂತೇ ತತ್ರ ರಮಂತೇ ದೇವತಾ:” ಅನಿಸಿಕೊಂಡವಳು! ಮುಂದೆ ಆಕೆಯು ಪುರುಷನ ಅರ್ಧಾಂಗಿಯೆನಿಸಿದಳು. ಬಹು ಕಾಲದ ತನಕ ಈ ಸಮಾನತೆ ಉಳಿಯಲಿಲ್ಲ; ಅಲ್ಲಿಂದ ಅವಳು ಕುಸಿಮುದೇ ಗುಲಾಮಗಿರಿಗೆ. ಯಾರ ತಪ್ಪು? ತುಳಿದವರದೇ, ತುಳಿಸಿಕೊಂಡವರದೇ? ಇದರ ಮುಂದಿನ ಪರಿಣಾಮವನ್ನು ಉಪಮೆಯಿಂದ ಚಿತ್ರಿಸಲೆಳಸಿದ್ದೇನೆ ಇಲ್ಲಿ.

ಉಳಿದ ನಾಟಕಗಳೆರಡೇನೆ—ಇಸ್ಪೀಟು ಗುಲಾಮ, ಗೆದ್ದವರ ಸತ್ಯ. ಒಂದು ನಮ್ಮ ನಾಡಿನ ‘ಜಾತೀಯತೆಯ’ ಪೆಡಂಭೂತದ ಅಣಕವಾಡ ಇನ್ನೊಂದು ಅಂತರಾಷ್ಟ್ರೀಯ ಆವರಣದ ಅಣಕ. ಒಂದರಲ್ಲಿ—ಇಸ್ಪೀಟಿನ ಕಾರ್ಡುಗಳ ನಲಿದಾಟವಿದೆ. ನಟರು ಗೊಂಬೆಗಳಂತೆ ಅಭಿನಯಿಸು

ವರು. ವಿಕಟ ರೀತಿಯಲ್ಲಿ ಕೈಕಾಲು ಸಿಡಿಯುವರು. ಇನ್ನೊಂದರಲ್ಲಿ ಜನಾಂಗಗಳು ಮೃಗಗಳಂತೆ ಪಾತ್ರಧಾರಿಗಳಾಗಿ ತಮ್ಮ ಅಪಹಾಸ ತಾವು ಮಾಡಿಕೊಳ್ಳುವಂತಿದೆ. ನಮ್ಮ ರಂಗದಲ್ಲಿ ಈ ತೆರನ ಅಣಕವಾಡಗಳು (mime) ರೂಢಿ ಇಲ್ಲ. ಇದೊಂದು ಪ್ರಬಲವಾದ ಚಿತ್ರಣಶಕ್ತಿಯೆಂಬುದನ್ನು ಮನಗಂಡಿದ್ದೇನೆ. ಈ ಯಾವತ್ತು ನಾಟಕಗಳು ರಂಗಭೂಮಿಯಲ್ಲಿ ನಟಿಸಲ್ಪಟ್ಟುವು. ಯೋಗ್ಯ ಸಲಕರಣೆ, ನಟನೆಗಳಿಂದ ತುಂಬ ಪರಿಣಾಮಕಾರಿಯಾಗಿ ಅವನ್ನು ತೋರಿಸಲು ಬರುತ್ತದೆ.

ಈ ನಾಟಕ ಮಾಲೆಯಲ್ಲಿ—ಮುಂದೆ ತರಬೇಕೆಂದಿರುವುದು ನನ್ನ ಅಚ್ಚಾದ, ಆಗದ ಇತರ ಗದ್ಯ ನಾಟಕಗಳನ್ನು. ಅಂಥವುಗಳ ಸಂಖ್ಯೆ ಸಾಕಷ್ಟು ಇದೆ. ನಾಟಕದಲ್ಲಿ ನನ್ನ ಮನಸ್ಸನ್ನು ತೊಯಗೊಡಿಸಿ ಇಂದಿಗೆ ಇಪ್ಪತ್ತೈದು ವರ್ಷಗಳೇ ಆದುವು. ಐದಂಕದ ಹತ್ತಿಪ್ಪತ್ತು ನಾಟಕಗಳನ್ನು ಗೀಚಿ ಮೂಲೆಪಾಲಾಗಿ ಮಾಡಿದ್ದೇನೆ. ಅವಕ್ಕಾಗಿ ವ್ಯಥೆಯಿಲ್ಲ. ಕಾರಣ ಆ ಒಂದು ಕಾಲದಲ್ಲಿ ಭಾವಾವೇಶದ ನನ್ನ ಮನೋಗತಿಯನ್ನು, ಈಗ ನಾನು ಪಾರಾಗಿ ಬಂದಿರುವೆನಾದುದರಿಂದ, ನನ್ನ ಮನದ ಪ್ರಗತಿಯನ್ನು ಅವು ಅಳೆಯಲು ಬಂದಾವೆಯೋ ಹೊರತು, ಅವು ನಾಟಕಗಳಾಗಿ ಎಷ್ಟು ಶೋಭಿಸಿಯಾವು-ಎಂಬುದು ಸಂಶಯದ ಮಾತು. 'ಒಂದಂಕ-ಒಂದು ದೃಶ್ಯ' ಈ ಹಿಡಿತ ಬರುತ್ತಲೇ ನನ್ನ ಬರವಣಿಗೆಗೆ ಒಂದು ಬಿಗುಮೂಡಿತು. ವಿಷಯಕ್ಕೆ ದೂರವಾದ ಜಂಜಾಟಕ್ಕೆ ಎಡೆಕೊಡದಿರಲು ಅದು ಸಾಧ್ಯಮಾಡಿತು. ಆದರೂ ಭಾವಾತಿರೇಕ ಇದ್ದಷ್ಟು ಕಾಲ, ಪಾತ್ರಗಳು ಅದೇ ಮನೋವೃತ್ತಿಯವರನ್ನು ಒಲಿಸಿ ನಿಂತರೂ, ಸತ್ಯ ಚಿತ್ರಣವನ್ನು ಕೊಡಲು ಅವು ಅಶಕ್ತವೇ ಆಗಿದ್ದುವು. ವಿವೇಚನೆಯ ಒರೆಗೆ ಸಿಗದ ಭಾವೋನ್ಮಾದವು ಕೆಂಗಾಜಿನ ಕನ್ನಡಕದಂತೆ. ಬಾಳ್ವೆ, ಬದುಕುಗಳ ಸಹಜ ಬಣ್ಣಗಳನ್ನು ಕಾಣಲು ಅವು ಕಠಿಣ ತಡೆ.

ಇಂದಿನ ನಮ್ಮ ಎಳೆಯರ ಕೂಗು—ನನ್ನ ಈ ದಾಟಿದ ಅವಸ್ಥೆಯನ್ನು ನನಗೆ ನೆನಪಿಗೆ ತಂದು ಕೊಡುತ್ತದೆ. ಜಗತ್ತನ್ನು ಉದ್ಧರಿಸಬೇಕೆಂಬ ನನ್ನ ಹಳೆಯ ಹಟವು, ಅವರ ಕೂಗಿಗಿಂತ ನೂರ್ಮಡಿಯಾಗಿತ್ತು. ಆದರೆ ನನ್ನ ನಾಟಕಗಳು ಕರ್ತೃವಾದ ನನ್ನನ್ನು ಉದ್ಧರಿಸುವುದಕ್ಕಿಂತ ಹೆಚ್ಚಾಗಿ, ಜನತೆಯನ್ನು ಉದ್ಧರಿಸಲಾರವಷ್ಟೆ!

ಅಲ್ಲದೆ-ಎಳೆತನದಲ್ಲಿ, ಸಮಗೆ ಸಮಾಜದ ನೂರಾರು ವ್ಯಕ್ತಿಗಳ ಜೀವನ ಪ್ರಶ್ನೆಗಳ ಪರಿಚಯವಾಗುವ ಮೊದಲು, ನಮ್ಮ ಭಾವಾತಿರೇಕ, ಊಹೆ, ಮಹಾಕಾಂಕ್ಷೆಗಳು ಎಷ್ಟೊ ಬೆಳೆಯಬಹುದು. ಆದರೆ ಅವು ವಸ್ತುಸ್ಥಿತಿಯ ಪರಿಚಯ ಮಾಡಿಕೊಡಲಾರವು! ಅದಕ್ಕೆ—ವಿವೇಚನೆಬೇಕು, ಸಹಜ ಅನುಭವಬೇಕು; ನಮ್ಮ ಕಣ್ಣಿನ ಕೆಂಗಾಜನ್ನು ನಾವು ಮೊದಲು ಕೆಳಕ್ಕಿರಿಸಬೇಕು. ಆಗ ನಮ್ಮ ಬದುಕಿನಲ್ಲಿ—ಬರಿಯ ರಕ್ಕಸರು, ದೇವತೆಗಳುಳಿಯುವುದಿಲ್ಲ. ಪ್ರತಿಯೊಬ್ಬನಲ್ಲೂ ಆ ರಾಕ್ಷಸತನ ದೇವತ್ವಗಳು ವಿವಿಧ ಪ್ರಮಾಣದಲ್ಲಿ ಬೆರೆತಿವೆ ಎಂಬ ದರ್ಶನ ಸಿಕ್ಕುವುದು. ನಮ್ಮ ಲೇಖನಿಗೂ ನಾಲಗೆಗಳಿಗೂ ಒಂದು ಹೆತೋಟಿ ಬರುವುದು. ಅಲ್ಲದೆ ಈ ಜ್ಞಾನದಿಂದ ನೊಂದುಕೊಂಡ ನಮ್ಮ ದೃಷ್ಟಿಯೂ, ಬದಲಾಗುವುದು.

ಭಾವಾತಿರೇಕದಂತೆ ತಲೆಯನ್ನು ಅಡ್ಡ ಹಾದಿಗೆ ಸೆಳೆಯುವ ಇನ್ನೆರಡು ದಾರಿಗಳಿವೆ: ಅವುಗಳಲ್ಲೊಂದು ಜನರ ಮನ್ನಣೆಯ ಕಾಂಕ್ಷೆ, ಅವರಿಂದ ಪ್ರಶಂಸೆಯ ಬಯಕೆ. ಅವರನ್ನು 'ಖುಶಿ' ಮಾಡಲು ದುಡುಕುವ ಬರವಣಿಗೆ ಹುಟ್ಟುವುದು. ತನ್ನ ಶಾಸ್ತ್ರ, ಚಿತ್ರಣ ವಿಧಾನ(Technique)ಕ್ಕೆ ಮೋಹಿತನಾಗಿ ನಮ್ಮ ಸಂಗೀತಗಾರನು ತೋರಿಸುವಂತಹ ಡೊಂಬರಾಟ ಇನ್ನೊಂದು. ನಾಟಕಕಾರನಲ್ಲಿ ಅದು ಮೂಡಬಹುದು ಎಂಬುದನ್ನು ನಾನು ಮನಗಂಡವ. ಅಭಿನಯದಲ್ಲಿ ನನಗೆ ತುಂಬ ಮಮತೆ. ಆದ್ದರಿಂದ ಅತ್ಯಂತ ಕಠಿಣಾಭಿನಯದ ಸಲುವಾಗಿಯೇ ಪಾತ್ರನಿರ್ಮಾಣ ಮಾಡಿದುದುಂಟು! ಆದರೇನು—ನಟನಿರುವುದು ಅಭಿನಯಕ್ಕಾದರೂ, ಅಭಿನಯವಿರುವುದು ನಾಟಕಕ್ಕಾಗಿ! ನಾಟಕ-ಕಲೆಗಾಗಿ. ಕಲೆ-ಜೀವನ ಅನುಭವವನ್ನು ಯಾವುದೇ ದಾರಿಯಿಂದ ಪ್ರತಿಫಲಿಸುವುದಕ್ಕಾಗಿ. ಯಾವುದಕ್ಕೂ ನಾವೆಣಿಸುವ ನಿರಂಕುಶ ಸ್ವಾತಂತ್ರ್ಯವಿಲ್ಲ.

ಪುತ್ತೂರು, ದ. ಕ.
19—11—46.

ಇತಿ
**ಶಿವರಾಮ ಕಾರಂತ.**

# ಪಾತ್ರ ಪರಿಚಯ

**ಕೃಷಿಕ:**— ರೈತನೊಬ್ಬ, ನಡುವಯಸ್ಸಿನವ. ಅವಿವಾಹಿತ. ಜಗದ ದುಡಿಮೆಯ ಸಾಂಕೇತಿಕ ವ್ಯಕ್ತಿ.

**ಸೇನಾನಿ:**—ಯೌವನಸ್ಥ ವೀರ. ಈತನೂ ಅವಿವಾಹಿತ. ವಿಲಾಸ ಪ್ರಿಯ, ಪರಾಕ್ರಮಿ, ಶೌರ್ಯಾದಿ ಗುಣಗಳ ಸಾಂಕೇತಿಕ ವ್ಯಕ್ತಿ.

**ಕವಿ:**— ತರುಣ, ಊಹಾಪ್ರಿಯ. ಮನೋವಿಲಾಸಗಳ ಸಾಂಕೇತಿಕ ಜೀವ.

**ಸುಮನೆ:**—ತರುಣಿ, ನಾರಿಕುಲದ ಮಾನಸಿಕ ಸಲ್ಲಕ್ಷಣಗಳ ಸಂಕೇತ ವೆನಿಸಿದವಳು.

**ಸುರಮೆ:**—ತರುಣಿ; ಸಂಪತ್ತು, ವಿಲಾಸ, ಮಹಾ ಆಕಾಂಕ್ಷೆಗಳ ಸಂಕೇತವೆನಿಸಿದಾಕೆ.

**ಸುಜಲೆ:**— ಸೇವೆ, ಶ್ರಮ, ಭಕ್ತಿ ಮೊದಲಾದ ಸೌಮ್ಯ ಗುಣಗಳ ತವರು ಮನೆ. ಈಕೆಯೂ ಅವಿವಾಹಿತೆ.

**ತ್ರೈದೇವಿ:**—ಸುಮನೆ, ಸುರಮೆ, ಸುಜಲೆಯರು ಸೇರಿ ಮೂರ್ತಿವೆತ್ತುವ ನವೀನ ದೇವತೆ.



## ಅಂಕ ೧.

**ದೃಶ್ಯ:** ಬಯಲುಗಾವಲೊಂದರಲ್ಲಿ, ಹೊತ್ತಾರೆ ಕೆಲಸಕ್ಕೆಂದು ಹೊರಟ, ಶೂನ್ಯ ಮನಸ್ಕನಾದ ಒಬ್ಬ ರೈತನ ಪ್ರವೇಶ.

**ಕೃಷಿಕ:—** ನೇಗಿಲೇತಕೆ ಇನ್ನು?
ಮನದೊಳಗೆ ಉಂಟಾದ ಶೂನ್ಯವನು ತುಂಬಿಸಲು
ಏನು ಹಾದಿಯೊ ಎಂದು ಕಳವಳಿಪೆನು.
ಯಾರಿಗಾಗೀ ದುಡಿತ, ಯಾರಿಗಾಗೀ ಮಿಡಿತ?
ಮನದ ಮಂದಿರವಿಂದು—ಬರಿದೆ ಇಹುದು!
ಎಷ್ಟು ಗೈದರು ಜೀವಕಿಷ್ಟಿಷ್ಟು ತೃಪ್ತಿ ಇಲ್ಲ.

**ಸೇನಾನಿ:—**ಹಾ-ನನ್ನಂತೆ ಕೆಲಸವಿಲ್ಲದ ಆಲಸಿಯೊಬ್ಬನು ಕಾಣುತಿಹನು!
ನನಗಾವರತಿಶಯದ ಚಿಂತೆಯಿದೆ—
ವಿಜಯವೆಲ್ಲವು ವ್ಯರ್ಥವಾಯ್ತೆಂದು!
ನನ್ನ ವಿಜಯವ ಕಂಡು ನಗುವ ಜೀವರು ಇಲ್ಲ;
ನನ್ನ ದಣಿವನು ಕಂಡು—'ಚಾ' ಎಂಬರಿಲ್ಲೆಂದು.
ಇವನಿಗೇನೊ!
ಮುಂಜಾನೆಯೇ ಎದ್ದು, ಹೊಲವ ಸೇರುವ ನೀನು,
ಇಂದೇನು ವೈಗಣ್ಯನಂತೆ ಇಹೆಯ?
ದುಡಿಯಬೇಡವೆ ನೀನು, ಹೊಟ್ಟೆತುಂಬಿಸಿ ಕೊಳಲು?

**ಕೃಷಿಕ:—** ಸೇನಾನಿಯಂತೆ ಕಾಂಬೆ!....
ನಿನ್ನ ಹುಬ್ಬಲಿ ವಿಜಯಗಳ ಉಬ್ಬು ಕಾಣುತಲಿಹುದು!
ಎನ್ನ ಪಾಡನು ತಿಳಿವ, ಜೀವನೇ ಅಲ್ಲ ನೀನು!
ನನ್ನ ಪಾಡೇಪಾಡು! ಬರಿಯ ಪಂಚಂಪಾಡು!
ದುಡಿವುದಂತೆ, ದಣಿವುದಂತೆ!

ಯಾರಿಗಂತೆ? ........
ಮಡಿಯುವುದು ನಿಜವಯ್ಯ: ಊಟಕಾಗಿ
ಉಂಬುವುದು ನಿಜವಯ್ಯ—ಬಾಳ್ವೆಗಾಗಿ!
ಆ ಬಾಳ್ವೆ ಏಕೆಂದು ಹೇಳುವೆಯು—ಯಾರಿಗಾಗಿ?
ಕಾಣಲಾರೆಯ ನೀನು, ನನ್ನ ಮರುಕದ ಸ್ಥಿತಿಯ?
ಮನವು ಬರಿದಾಗಿಹುದು! ಒಳಗೆ ದೀವಿಗೆ ಇಲ್ಲ!

**ಸೇನಾನಿ:—** ನಿಜ ಕೃಷಿಕ, ನಿನ್ನಂತೆ ನಾನು!
ಮನವು ಬರಿದಾಗಿಹುದು; ಒಳಗೆ ದೀವಿಗೆ ಇಲ್ಲ!
ನೋಡಪ್ಪ-ಕೆತ್ತಿದೆನು, ಕೊತ್ತಿದೆನು ನೂರಾರು ತಲೆಗಳನು!
ರಾಜರನು ಗೆಲಿದಾಯ್ತು, ಸಂಪದವ ಗೆಲಿದಾಯ್ತು!
ನನ್ನ ಮೇಲ್ ಕತ್ತಿಯಾಳ್ ಇನ್ನಿಲ್ಲವಾಯ್ತು.
ಮುಂದೇನು—ಎಂಬುದೇ ನನಗೊಂದು ಚಿಂತೆ.
ಯಾರಿಗಾಗೀ ಸಿರಿಯು? ಯಾರಿಗಾಗೀ ವಿಜಯ?
ಯಾರ ನಗುವನು ನಾನು ಕಾಣಲುಂಟು?
ಯಾರು ಎನ್ನನು ಕಂಡು, ಮುಗುಳ್ ನಗಲು ಉಂಟು!

(ಅಲ್ಲಿಗೆ ಕವಿಯೊಬ್ಬನ ಪ್ರವೇಶ)

**ಕವಿ:—** ನನ್ನಂತೆ ಇರುವರೀ ಜನರದಾರು? ಕವಿಗಳೇನು!
ಕೆಲಸವಿಲ್ಲದೆ—ಸೃಷ್ಟಿ ಸೌಂದರ್ಯವೆಲ್ಲವನು
ಅರಸರಸಿ, ಹಾಡುವುದೆ ಕೆಲಸವೇನು!
ಅಲ್ಲ! ಕತ್ತಿಯಾಳ್ ಒಬ್ಬನಿಹ!
ನೇಗಿಲಿನ ದಾಸನಿನ್ನೊಬ್ಬನು!
ಒಬ್ಬನದು—ಗೌರವದ ಬಾಳ್ವೆ!
ಇನ್ನೊಬ್ಬ—ಭಕ್ತನಯ್ಯ!
ನನ್ನಂತೆ ನಾಡಾಡಿ, ವೈಗಳ್ಳರಾರೂ ಇಲ್ಲ!

**ಸೇನಾನಿ:—** ನೋಡಲ್ಲಿ, ಕವಿಯು ಬರುತಲಿ ಇಹನು;
ಅವನಿಗರುಹುಂಟೇನೊ!

**ಕೃಷಿಕ:—** ಬೆಳಕು ಎಲ್ಲಿದೆಯೆಂದು ಅರಿತಿರಲು ಬಹುದು.
ಹಗಲು ರಾತ್ರಿಯು ಅವನು ಸುಖಿಯಾಗಿ

ಮಲಗುವನು—ಹಾಡುವನು—ನಲಿಯುವನು!
ಓ—ಕವಿಯೆ! ಬೆಳಕು ಎಲ್ಲಿ!

**ಕವಿ:—** ಬೆಳಕು ಎಲ್ಲಿ! ಯಾವ ಬೆಳಕು?
ಬೆಳಕೊಂದ ಕಾಣುವೆನು—ದಿನನಿತ್ಯ!
ಮೂಡುವುದು ಮೂಡಣದಿ
ಸಂಜೆಯಾಗಲು ಅದುವೆ ಕಣ್ಮರೆಯು ನೋಡು!
ಆ ಬೆಳಕ ಬಲ್ಲೆನೈ; ಕಂಡು ಬೇಸರವಾಯ್ತು!
ನೀನು ಕೇಳಿಹ ಬೆಳಕ....?

**ಸೇನಾನಿ:—** ಹೀಗೇಕೆ ಹೇಳುವೆಯು, ನನ್ನಣ್ಣ!
ಬಡರೈತನಿವ
ದುಡಿದ, ನುಗ್ಗಾದ ಅವನ ಮನಮಂದಿರವು
ಕತ್ತಲಲಿ ಮುಸುಕಿಹುದು.
ಬೆಳಕ ತೋರೈ ನೀನು—
ನಾನು ಅಂತೆಯೆ ನೋಡು—ಬೆಳಕ ಅರಸುತಲಿಹೆನು!

**ಕವಿ:—** ಬೆಳಕು! ಬೆಳಕೆಂಬ ಆ ವಸ್ತು ನಾವ್ ಕಾಣದುದು ಇರಬೇಕು!
ಈ ಕವಿಯು ಅನುದಿನದಿ ಹೊಗಳಿ ಹಾಡಿದ ಬೆಳಕು;
ಬೇಸರುಣಿಸಿದ ಬೆಳಕು;
ಇನ್ನೇನು ಬೆಳಕೋ—ಮನವು ಮರುಗುವುದಕ್ಕೆ.

**ಸೇನಾನಿ:—** ನೀನು ನಮ್ಮಂತೆಯೆ!

**ಕವಿ:—** ಇಲ್ಲ, ಜಗವೆಲ್ಲ ನಮ್ಮಂತೆಯೇ.

**ಸೇನಾನಿ:—** ಬಾ ಪೋಪ ಕೈವಿಡಿದು
ಈ ತನಕ ವೈರಿಗಳ ಅರಸರಿಸಿ ಅಲೆದಂತೆ
ಈ ದಿನದಿಂ—ಬೆಳಕ ಹುಡುಕಲು ಪೋಪ!
ಮನಕೆ ನಿಶ್ಚಿತ ನಗುವು, ಬೆಳಕು, ದೊರೆಯುವ ತನಕ—
ನಿಲ್ಲಲಾಗದು ನಮ್ಮ ಅನ್ವೇಷಣ.

**ಕವಿ:—** ನಾ ಮುಂದೆ ಈ ಕೆಲಸಕ್ಕೆ

**ಕೃಷಿಕ:—** ನಾ—ಹಿಂದಿಲ್ಲ, ನಿಮ್ಮೊಂದಿಗೆ . . . . . (ಸರಿಯುವರು)

[ಅವರು ಸರಿಯುತ್ತಲೆ--ಸಮಾನ ವಯಸ್ಕರಾದ ಮೂವರು ಕನ್ಯೆಯರು ಅಲ್ಲಿಗೆ ಆಗಮಿಸುವರು. ಅಲ್ಲಿ ತುಸು ಹೊತ್ತು ಆಡಿ, ಹಾಡಿ, ನಲಿದು ವಿಶ್ರಮಿಸಿ ಬೇಸರಗೊಳ್ಳುತ್ತಲೆ]

**ಸುಮನೆ:—** ಗೆಳತಿಯರೆ, ನಲಿದಾಯ್ತು, ಹಾಡಿಮುಗಿಸಿದು ಆಯ್ತು!
ಮುಂದೇನು?
ಏತಕೋ ಮನವಿಂದು ಚಂಚಲವದಾಗಿಹುದು!
ಇಷ್ಟೆಲ್ಲ ನಲಿದು ತೇಲಿದರು, ಆಸೆಯೇನೋ ಒಂದು
ಕೈಗೂಡದಂತಿಹುದು!

**ಸುರಮೆ:—** ನನಗು ಅಂತೆಯೆ ಅಕ್ಕ, ಸುಮನೆ—
ಎಂದಿನಿಂ ನಾವ್ ಮೂವರೂ ಬಾಳ್ವೆಮಾಡಿಹೆವಲ್ಲ—
ಆನಂದ ಪಡುತಿಹೆವು, ಕುಣಿಯುವೆವು, ನಲಿಯುವೆವು!
ಆದರೂ—ನನಗಿಂದು ಅನಿಸುತಿದೆ
ಏನೊ—ಕಡಿಮೆಯಾಗಿದೆ ಎಂದು!
ಏನೆಂದು ಹೇಳಲಾರದು ಮನವು!
ತಾನಾಗಿ ಸೂಚಿಸಲೊಲ್ಲದು

**ಸುಜಲೆ:—** ನೀವಿಬ್ಬರೇ ಎಂದು ಯೋಚಿಸಲದೇತಕ್ಕೆ—
ನಾನೂ ಇರುತಿರುವೆನಂತೆಯೆ!
ಈ ಸುಜಲೆಯ ರಾಜ್ಯಕ್ಕೆ ಗೆಳೆಯರಿಲ್ಲದೆ ಇಂದು
ಮನಕೆ ಇಲ್ಲವು ಶಾಂತಿ.

**ಸುಮನೆ:—** ಗೆಳೆಯರೇ! ಏಕೆ?....ಗೆಳೆಯರಲ್ಲವೆ ನಾವು!

**ಸುಜಲೆ:—** ನಿಜ, ಗೆಳೆಯರಹುದೈ ನೀವು. ಜೀವೆಲ್ಲ ಒಂದಾಗಿ
ಕಲೆತಿರುವ ನಿಮಗಿಂತ ಗೆಳೆಯರಾರು?
ಆದರೂ ಅಕ್ಕದಿರೆ, ಏನನೋ ಬಯಸುತಿವೆ ಈ ಜೀವ.
ಏನೆಂಬುದದು ಮಾತ್ರ ಅರಿವಿಲ್ಲದಿಹುದು.

**ಸುರಮೆ:—** ಬಾ ಗೆಳತಿ, ನರ್ತನವ ತೊಡಗುತಲಿ ಎಲ್ಲ ಚಿಂತೆಯ ಮರೆವ.

[ತಿರುಗಿ ಮೊದಲಿನಂತೆ ನರ್ತಿಸಲು ಪ್ರಾರಂಭಿಸುವರು. ಅಲ್ಲಿಗೇನೆ ಕವಿ ಸೇನಾನಿಯ ರೈತರು ಬರುವರು.]

**ಕವಿ:—** ನಿಜನಿಜವು! ಕಳೆದ ಸ್ವರ್ಗವೆ ಕೈಗೆ ಬಂದಂತೆ ಆಯ್ತು!

**ಸೇನಾನಿ:**—ಸಮರದರಸಿಯ ಮುಖವ ಕಂಡಂತೆ ಆಯ್ತು!
**ಕೃಷಿಕ:**— ಏಕೆ—ಸುಗ್ಗಿ ತೆನೆಯೆಲ್ಲವೂ ಕೂಡಿ ಬಂತು!

[ಸುಮನೆಯನ್ನು ಕಂಡು ಬೆರಗಾದ ಕವಿ]

**ಕವಿ:**— ಓ ನಾರಿ! ಛೀ—ಕವಿಯನಾಲಗೆಯೇನು ಇಂತು ನುಡಿಯೆ?
ಓ ನಾರಿ—ಎಂಬೆ!
ಓ ರಮಣಿ . . ಛೀ - - ಇನ್ನೇನೊ ಅನಬೇಕು.
ಓ ದೇವಿ! ಎನ್ನ ಭಾವರಾಜ್ಯದ ದೇವಿ!
ಏನೊ ಕಳೆದಂತಿತ್ತು ಇಷ್ಟೊಂದು ದಿನ ಜೀವ!
ಕಾವ್ಯ ಬರೆದರು ಸಿದ್ಧಿ ಇಲ್ಲದಂತಿತ್ತು
ಚಿತ್ರ ಬರೆದರು ಜೀವಕಳೆ ಇಲ್ಲದಿತ್ತು!
ಕಳೆದು ಕೊಂಡೊಂದು ಜ್ಯೋತಿ ದೊರಕಿದಂತಾಯ್ತು!

[ಸುರಮೆಯಲ್ಲಾಸಕ್ತನಾದ ಸೇನಾನಿ]

**ಸೇನಾನಿ:**—ಓ—ವಿಜಯರಾಣಿ!
ನಿಜ—ಎನಗನಿಸುತಿದೆ ಈಗ—ನನ್ನ ವಿಜಯ
ಗಳೆಲ್ಲ—ನಿಜಕು ನಡೆದುವು ನಿನಗಾಗಿ ಎಂದು!
ನಿನ್ನ ನಗುವನು ಕಾಣೆ, ಈ ಖಡ್ಗವೆತ್ತಿದೆನೆಂದು!
ನೀನೆನ್ನ ಜೀವನದ ವಿಜಯದೇವಿಯೆಂದು!

[ಸುಜಲೆಯಲ್ಲಿ ಆಸಕ್ತನಾದ ಕೃಷಿಕ]

**ಕೃಷಿಕ:**— ಅಷ್ಟೊಂದು ಮಾತು ಬಾರದು ತಾಯಿ!
ಸಟೆಯಲ್ಲ, ಪೇಳ್ವೆನಿದ—
ನನ್ನ ಗುಡಿಸಲ ದೀಪ—ನೀನೆ ತಾಯಿ!
ನನ್ನ ದೇಗುಲದೊಡತಿ ನೀನೆ—ಬಂಧು!
**ಸುಮನೆ:**—ಯಾರಿವನು—ಮಾತಿನಲಿ ಬಲು ನಯಗಾರನಿಹನು!
**ಸುರಮೆ:**—ಇವನಂಥ ಪೌರುಷಿಯು ಕಾಣದಿಹೆನು!
**ಸುಜಲೆ:**— ಭಕುತಿಯಿಂದೆನ್ನ ಮನ ಬಗ್ಗುತಿಹುದು!
**ಕವಿ:**— ದೇಗುಲದ ಒಡತಿಯೆಂದೆನು ಎನ್ನ ಕೃಷಿಕ ಗೆಳೆಯ!
ನಿಜ ದೇವಿ—ದೇಗುಲದ ದೇವಿಯಿರುವೆ!
ಕೃಷಿಕನವ ಹಳ್ಳಿಯವ; ನಯಗಾರನಲ್ಲ; ಕವಿಯಲ್ಲ

ನಾನೆಂಬೆ—ನೀ ಒಡತಿಯಲ್ಲ; ದೇವಿ!
ದೇವಿ!—ಭಾವದೇವಿ! ಜೀವ ದೇವಿ!
ಈ ಜೀವವೇ ಆಯ್ತು—ನಿನ್ನ ಹಾಡುತ ಹೊಗಳೆ,
ಕಾವ್ಯ ಕಲೆಗಳು ಎಲ್ಲ ನಿನ್ನ ಸೇವೆಗೆ ತಾವು
ಹಾತೊರೆಯುತಿಹವು!

**ಸುಮನೆ:—**ಏತಕೋ—ಇವನ ಮಾತಿಗೆ ಮನವು
ಸೋತು ಮರುಳಾಗಿಹುದು!
ನನ್ನ ಜೀವನದ ಕೊರತೆಯನು ನೀಗಿಸನೆ ಇವನು?

**ಸೇನಾನಿ:—**ಓ ದೇವಿ—ನಿನ್ನ ರಾಣಿಯಗೈದು
ಸಾಮಂತನಂದದಿ ಸೇವೆಯನು ಸಲಿಸಲಿಕೆ
ಈ ಜೀವ ಜನುಮ ತಾಳಿತು ಎಂದು, ಎನ್ನ ತಿಳಿವು!

**ಸುರಮೆ:—**ಎಷ್ಟು ಗೌರವವಿವಗೆ ಎನ್ನೊಳಗೆ ಇಹುದು!
ನಿಜಕು—ಇವನಿಂದಲೇ ಮುಂದೆ ಸುಖವಪ್ಪುದೆನಗೆ.

**ಕೃಷಿಕ:—** ಓ ಎನ್ನ ದೇಗುಲದ ಒಡತಿ,
ನಿನ್ನ ವರದ ಹಸ್ತವ ನೀಡೆ!
ನೆಲದ ದಾಸನ ಬಾಳ್ವೆ ಸಾರ್ಥಕವು, ನಿಜವು!

**ಕವಿ:—** ಏನೀ ಪ್ರಶಾಂತತೆ!

**ಸೇನಾನಿ:—**ಏನೀ ಮೌನ!

**ಕೃಷಿಕ:—** ಏನೀ ಆದರ!

**ಮೂವರು:-**ಹೆಣ್ಣು ಬಾಳ್ವೆ— ಎಂಬುದರ್ಥ!
ಮನಕೆ ಮನವು ಕೂಡೆ ಮಾತ್ರ
ಜೀವ, ಭಾವ ಬಾಳ್ವೆ—ಪೂರ್ಣವಹುದು!

**ಕವಿ:—** ಓ ಎನ್ನ ಭಾವರಾಜ್ಯದ ದೇವಿ
ನಿನಗೆನ್ನ ಮನಸಿನೊಳೆ ಮಂಟಪವ ಗೈಯುತ್ತೆ....

**ಸೇನಾನಿ:—**ಓ ರಾಣಿ—ನಿನಗೊಂದು ದಿವ್ಯವಹ ಅರಮನೆಯ ರಚಿಸುತ್ತೆ,

**ಕೃಷಿಕ:—** ಓ ಒಡತಿ ನಿನಗೆನ್ನ ದೇಗುಲದಿ ಪೂಜೆಗೈವೆ

**ಮೂವರು:-**ಈ ಬಾಳ್ವೆಗೊಲಿಯಲಾರಿರ ನೀವು?

**ಸುಮನೆ:—**ಸೇರುವೆವು ನಿಮ್ಮಗಳ! ಜೀವನದ ಕಳೆದರ್ಥವನು

ನೀಡುವಿರಿ ಎಂಬಾಸೆ.

**ಸುರಮೆ:**—ನಾ ಕಾಣದಿಹ ಸಿರಿಯು—ನೀವಿರೆಂಬಾಸೆ!

**ಸುಜಲೆ:**— ನಾ ಸವಿಯದನ್ನವನು ಬಡಿಸುವಿರಿ ಎಂಬಾಸೆ!

**ಕವಿ:**— ವಚನವನು ನೀಡುವೆನು—ಅಪನಂಬುಗೆಯು ಏಕೆ?
ಮೂಜಗಕೆ ಸಾರುವೆನು!
ನಾರಿಯೆಂಬುವ ರತ್ನ—ಭೂಮಿತಾಯಿಯ ದಾನ!
ಎಲ್ಲಿ ನಾರಿಗೆ ನಲಿವೊ ಅಲ್ಲಿ ಬಾಳ್ವಿಗೆ ಚೆಲುವು!
ಕಾವ್ಯ ಕಲೆಗಳು ಎಲ್ಲ, ಜೀವಭಾವಗಳೆಲ್ಲ
ಭಾವ ದೇವಿ—ನಿನ್ನ ಪೂಜೆಗಿಹುವು!

[ಎಂದು ಸುಮನೆಯ ಮುಂಗಡೆ ಮೊಣ ಕಾಲೂರುವನು. ಅವಳು ಒಲಿದು ಹಸ್ತವನ್ನು ನೀಡುವಳು.]

[ಸುರಮೆಯ ಮುಂದೆ ಸೇನಾನಿ ಮಂಡಿಯೂರುವನು.]

**ಸೇನಾನಿ:**—ಇದೋ, ರಾಣಿ—
ನನ್ನ ಕೀರ್ತಿಯ ಕಳಸ ನಿನ್ನ ಅಡಿದಾವರೆಗಳಿಗೆ
ನನ್ನ ಎಲ್ಲ ಸಾಹಸ, ಬನ್ನ ನಿನ್ನೊಲುಮೆಗೆ!
ಎಲ್ಲಿ ನಿನಗಿದೆ ಪೂಜೆ—ಅಲ್ಲೆ ದೇವರ ಪೂಜೆ

[ಸುರಮೆಯು ಸೇನಾನಿಯನ್ನು ಸ್ವೀಕರಿಸುವಳು.]

**ಕೃಷಿಕ:**— ಮಾತು ಬಾರದ ನಾನು ನಿನಗೇನನೆಂಬೆ!
ನೀನೆನ್ನ ಮನೆಯ ಬೆಳಕು, ನೀನೆನ್ನ ಗುಡಿಯ ರಾಣಿ!
ನೀನು ಒಲಿದರೆ ಬೆಳೆಯು, ನೀನು ಒಲಿದರೆ ಮಳೆಯು!
ನೀನಿಲ್ಲದಿರೆ ಧರಣಿ ಮರಳುಗಾಡು!

[ಸುಜಲೆಯು ಕೃಷಿಕನನ್ನು ಸ್ವೀಕರಿಸುವಳು.]



## ಅಂಕ ೨.

[ಕವಿಯ ಮನೆಯ ಉದ್ಯಾನದಲ್ಲಿ, ಬೇಸರಗೊಂಡ ಸುಮನೆ.]

**ಸುಮನೆ:—** ಬೇಸರವು ಬಂದಿಹುದು; ಈ ದೇಗುಲದ ಜೀವನವು!
ಕವಿಯಾದುದಕೊ ಏನೊ—ಎನ್ನ ಪತಿ, ಅನುದಿನವು
ಪೊಗಳ್ವುದೊಂದೇ ಕೆಲಸ ಅವಗೆ.
'ದೇವಾವತಾರಿ' ಎಂಬನೊಮ್ಮೆ! 'ದೇವಿ' ನಾನೆಂಬನೊಮ್ಮೆ!
ಮುಖವ ಎತ್ತುತ್ತೆ, ತಾನು ಮುದ್ದಿಸುವ ಮೊದಲೆ,
ಈ ಮುಖವು ಚಂದ್ರನಂತಿಹುದು, ಕಮಲದಂತಿಹುದು,
ಸಲಿಲದಂತಿಹುದು, ಸರೋವರದಂತಿಹುದು—ಎಂಬ.
ಕಣ್ಣಿರಳಿ ಕಾಣುವುದಕೆ ಮೊದಲೆ—ಎಂಬ ತಾನ್
'ಇವು ಗಗನದಿಂ ಬಂದಿಳಿದ ಚುಕ್ಕಿಗಳು!
ಇವು ಪದ್ಮದಿಂದಾರಿಸಿದ ಪಟಲಗಳು!
ಇವು ನೀರಿನೊಳಗೋಡುವಾ ಮೀನುಗಳು!
ಇಂತಂತೆ, ಅಂಗಾಂಗವೆಲ್ಲವನು ಬಣ್ಣಿಸಿ
ಅವಗೆ ಬೇಸರಿಕೆಯೂ ಬಾರದಿಹುದು!
ಸಾಕವ್ವ, ಈ ದೇಗುಲದ ಜೀವನವು!
ಯಾರೊಡನೆ ಪೇಳಲೆನ್ನಂತರ್ವ್ಯವನು
ನಾ ಬಯಸಿದುದು—ಸಖ್ಯ, ಜೀವನದ ಗೆಳೆತನವ.
ಈ-ಪೂಜೆ, ಬಣ್ಣನೆ, ಈ ಕಾವ್ಯಗಳಿಲ್ಲ ಎನಗೇಕೊ—
ಮನದ ಆಶಯವನ್ನು ಬಿಡಿಸುವುದಕ್ಕಿಲ್ಲ;
ಮನದ ನಗುಬಗೆಗಳಂ ಅರುಹುವಂತಿಲ್ಲ;
ಬಾಯ್ತೆರೆವ ಮೊದಲೆ ಬಣ್ಣನೆಯು ಆಯ್ತು!

**ಸೇನಾನಿ:—** (ಅಲ್ಲಿಗೆ ಬಂದು)
ಕವಿಯ ಮನೆಯದು ಬಂತು!
ಕವಿಯ ಪಾಡೂ—ಇಂತೆ ಏನು?
ಅವನಿಗೂ ನನ್ನಂತೆ ಸ್ತುತಿಪಾಠಕನ ಬನ್ನವೊ!
ತಾಯಿ!

**ಸುಮನೆ:—**ಅಲ್ಲ—ದೇವಿ!

**ಸೇನಾನಿ:—**ತಪ್ಪಿದೆನ್ನನು ಕ್ಷಮಿಸು. ಅಕ್ಷಾತ್ರವಾಯ್ತು.
ದೇವಿ—ಗೆಳೆಯ ನನ್ನವ ಕವಿಯು, ಮನೆಯೊಳಗೆ ಇಹನೆ?
ಕ್ಷೇಮವೇ—ನಿಮ್ಮಯ ಜೀವ?

**ಸುಮನೆ:—**'ಲೇಸಾಯ್ತು—ಕ್ಷೇಮವೇ ಜೀವ!'
ಕ್ಷೇಮವಲ್ಲದೆ ಜೀವಕಿನ್ನೇನು ಬೇಕು?
ಜೀವವೆಂಬುದು ತಾನು—ಹಣ್ಣ ತಿನ್ನುವುದಿಲ್ಲ
ಹೂವು ಬೇಡುವುದಿಲ್ಲ.
ಮನದ ಬಯಕೆಗೆ ಬೇಡ—ಸೆಚ್ಚು, ನಗುವು.
ಅದಕೆ ಬೇಕೇನು? ಸ್ತುತಿ ಪಾಠ!
ಜೊಗಳ್ ಭಟ್ಟನೆನ್ನ ಕವಿ. ಹೊಗಳುವನು!
ಮಂದಿರವ ರಚಿಸಾಯ್ತು, ಗುಡಿಯಾಯ್ತು,
ಗೋಪುರವದಾಯ್ತು. ನಾ ದೇವಿಯಾದೆ!
ಚಂದ್ರ ತಾರೆಗಳೆಲ್ಲ
ಸೂರ್ಯ, ಸರಸುಗಳೆಲ್ಲ
ಭ್ರಮರ, ಕಮಲಗಳೆಲ್ಲ—ನನ್ನ ಗೆಳೆತನಕಾಗಿ
ಬಾಯ್ಬಿಡುತಲಿದ್ದುವೈ!
ಅವುಗಳಾಸೆಯು ಇಂದು ಪೂರ್ಣವಾಯ್ತು!
ನನ್ನ ಮುಖದಂತೆನಲು—ಕಮಲ, ಸರಸುಗಳ್ ಧನ್ಯ!
ಬೇಸರನ್ನೋ!...

**ಸೇನಾನಿ:—**ಅವನ ಕಾಣಲು ನನಗೆ ಅವಸರವು ... ಅವನೆಲ್ಲಿ!

**ಸುಮನೆ:—**ನನ್ನ ಪೂಜೆಗೆ, ಎಂದು—ಹೊಸ ಅಲಂಕಾರ, ಉಪಮೆಗಳ
ಹುಡುಕುವುದಕೆಸಗುತಿರಬೇಕು ಕಠಿಣ ತಪವ.

**ಸೇನಾನಿ:—**ಅವಸರದ ಕಲಸವಿದೆ; ಕ್ಷಮಿಸಕ್ಕ... ಕ್ಷಮಿಸು ದೇವಿ!
(ತೆರಳುವನು).

**ಕೃಷಿಕೆ:—**ನಾನೆಂಥ ಮೂರ್ಖನಿಹೆ! ಇದು ಮೊದಲು, ಕೆಲಸವೊಂದೇ ಇತ್ತು;
ಎರಡಾದುವೀಗ.........
ಉತ್ತು ಬಿತ್ತುವ ಜತೆಗೆ, ಕೊಯ್ದು ಕುಟ್ಟುವ ಜತೆಗೆ,

ನೈವೇದ್ಯ, ಆರತಿಯು ಗೈವ ಕೆಲಸವಾಯ್ತು!
ಗೈಯ್ಯುವುದು, ದುಡಿಯುವುದು; ಬೆವರ ಹನಿಗಳ ಸುರಿಸಿ
ಮನೆಯ ನೆರಳನು ಕಂಡು ಹಿಗ್ಗುವುದು!
ಹಿಗ್ಗು ಅಡಗುವ ಮೊದಲೆ—ಇನ್ನೊಂದು ಕೆಲಸ—
ನನ್ನೊಡತಿ ಪೂಜೆ!
'ನೀನೆ ಗೃಹಲಕ್ಷ್ಮಿ,
ನೀನೆ ಮನೆಯ ಬೆಳಕು,
ನೀನು ಬಂದುದೆ ಈ ಮನೆಯ ಭಾಗ್ಯ!
ದಾರಿದ್ರ್ಯವೆಲ್ಲವು ತೊಲಗಿ
ಪರಮ ಪಾವನವಾಯ್ತು—ಗುಡಿಯು ಇದುವು!'
ಎಂದು ನುತಿಸುತಲಿರುವ ಪಾಡು ಬಂತೆ!
ಹಾಡಿದೆನು, ಹಾಡಿ ಬಂದಿತು ದಣಿವು
ಕವಿಯಂತೆ ನಿಡಿದ ನಾಲಗೆಯೇನು ಇಲ್ಲವೆನಗೆ.
ಇಷ್ಟು ಪೂಜೆಗೂ ಅವಳು ಒಲಿದಂತೆ ಕಾಣಿಸದು!
ಇಗೊ ಅತ್ತ—ಕವಿ ಬಂದ!
ಅವನ ಉಪದೇಶದಿಂ, ಹೊಗಳಿಕೆಯ ಬಗೆಯರಿತು
ತೊಲಗಿಸುವೆ ದುಗುಡಗಳ

**ಕವಿ:—** ಓ, ಕೃಷಿಕ—ಚೆಲುವೆ ನಿನ್ನೀ ಬಾಳ್ವೆ!

**ಕೃಷಿಕ:—** ಅದರಂತಿರಲಿ ಕವಿಯೆ—
"ನಿನಗಾಗಿ ಆಯಿತು ಎನ್ನ ಜನ್ಮ,
ನಿನ್ನ ಕಾಣದರುಳಿಯದೀ ಜೀವ"
ಎಂದೆನುವ ತಾತ್ಪರ್ಯ, ಕವಿಮಾತಿನೊಳ್ ಎನಗೆ
ತಿಳಿಸಿ ಪೇಳುವೆಯೇನು?

**ಕವಿ:—** ಇದು ಏನು ಸೋಜಿಗವು! ನನ್ನಂತೆ ಕವಿಯಾಪ ಆಸೆ!
ಕವಿಯಾಗಿ ನನಗೆ ಬಂದಿತು ದಣಿವು!
ಕಾಣದುದ ಕಂಡುದಕೆ ಹೋಲಿಪುದು;
ಕಾಲಂಶವನು, ನೂರ್ಮಡಿ ಎಂದು ಪೇಳುವುದು;
ದುಃಖವನು ಕಡಲಿಂಗೆ—ಆದೇನ್ ಅಪರಾಧಿಯೋ!

ಸುಖವನ್ನು—ಹೂವಿಗೋ ಇನ್ನೇತಕೋ ಹೋಲಿಪುದು
ಅದು ನನ್ನ ಕೆಲಸ—ನಿನಗೇಕೆ ಆ ಬವಣೆ!

**ಕೃಷಿಕ:—** ಬೇಕಾಯ್ತು ಪ್ರತಿಯೊಂದು, ನನ್ನ ಗುಡಿ ದೇಗುಲವಾಯ್ತು!
ನಾ ಪೂಜಾರಿಯಾದೆ.
ಸ್ತುತಿ ಇಲ್ಲದೆಲ್ಲಿಯು ಪೂಜೆ ಗೆಳೆಯ?

**ಕವಿ:—** ಸಂಸಾರವೆಂಬುವ ಭವ ಶರಧಿಯೊಳು ಮುಳುಗಿ!

**ಕೃಷಿಕ:—** ಗೆಳೆಯ, ಕವಿಯ ಸಂಸಾರವದು ಶರಧಿಯಾಗಿರಬಹುದು!
ನನ್ನದದು ಕೂಪ! ಕೂಪಕ್ಕಿಂತ ಕಿರಿದು—ನೀರಿಲ್ಲ; ಕೆಸರೆ!
ಅದರೊಳಗೆ ಮುಣುಗುವಂತಾಯ್ತು.
ನೀರಿರಲು ಈಸುತಲಿದ್ದೆ!
ಈ ಕೆಸರೊಳಗೆ ಈಸುವಂತೂ ಇಲ್ಲ!

**ಕವಿ:—** ಏನು ಗೈಯಲು ಬಹುದು? ಗೆಳೆಯ, ನಿನ್ನಂತೆ ನಾನು!
ನಮ್ಮದೇ ತಪ್ಪು!
'ದೇವಿ'ಯರು ಎಂದೋಲಿಸಿ, ಪೂಜಿಸಲು ನಾವೊಪ್ಪಿ
ಕರೆದವರು ನಾವಲ್ಲದಿನ್ನಾರು ಪೇಳು?
ಇನ್ನಾರಿಗಾ ಗೋಳು!
ನೀನೆನ್ನಲಿಲ್ಲವೆ: ನಿನ್ನ ದೇಗುಲದೊಡತಿ—ಆಕೆಯೆಂದು?
ನಿನ್ನ ಮಂದಿರವದಕೆ ದೀಪವೆಂದು!

**ಕೃಷಿಕ:—** ಅಂದಾಯ್ತು, ಅಂದುದಕೆ ದಣಿದಾಯ್ತು!

**ಕವಿ:—** ಬಾರಾ, ಬಾ,—ಸೇನಾನಿ ಹಲವು ರಣಗಳ ಹೊಡಿದಾತ!
ಈ ಪೂಜಾ ಸಮರವನು ಗೆಲುವಂತೆ
ಮಾಡುವನೆ—ಕಾಂಬ!

(ಎಂದು ಯೋಚನೆಯೆಸಗಲು ಸೇನಾನಿಯನ್ನು ಹುಡುಕಿ ಹೋಗುವರು.
ಸುಮನೆಯನ್ನು ಕಾಣಲಿಕ್ಕೆಂದು ಸುಜಲೆ, ಸುರಮೆಯರು ಬರುವರು)

**ಸುರಮೆ:—** ಇದನು ಬಯಸಿದೆವೇನು!
ಈ ಚಿನ್ನ, ಈ ಬೆಡಗು, ಈ ಹೊಗಳ್ಕೆ—ಇವನು
ಕೇಳಿದರಾರು?
ಇವಿಲ್ಲದೆಮಗೇನು ಕೊರತೆಯೆಂದೆನಿಸಿತ್ತು,

ಕೊಂಡೇನು ಲಾಭವಾಯ್ತು ?
ಕೂಡಿರ್ದ ಗೆಳತಿಯರು—ಜೇರಾದೆವೀಗ!
ಏಕಾಂತ ವಾಸಕ್ಕೆ ಒಂದೊಂದು ಗುಡಿಯಾಯ್ತು!
ಮಾತುಕಥೆಗಾರಿಲ್ಲ, ಸುಖ ದುಃಖಕಾರಿಲ್ಲ!
ಪೂಜೆ ಸತ್ಕಾರಕೆಲ್ಲ!
ಏನ ಬಯಸಿದೆವೊ! ಏನು ಕೊಂಡೆವೊ!
ಏನನುಭವಿಸುತಿಹೆವೊ!

**ಸುಜಲೆ:—** ಸುರಮೆ, ನಿಜವಿಹುದು ನಿನ್ನ ನುಡಿ;
ಬೇಸರಿಟ್ಟಿದೆ ಜೀವ!
ಬಳಿಯೊಳಗೆ ಅವನಿದ್ದು, ಇಲ್ಲವಂತಾಯ್ತು!
ಸುಮನೆಯನು ಕಾಣದಾಯಿತು ವರ್ಷ!
ನಿನ್ನ ಕಂಡುದು ಇಂದು!
ದೇಗುಲದ ಪೀಠವನು ಬಿಟ್ಟೇಳುವುದಕಿಲ್ಲ
'ಕೋಪವೇ ನನ್ನೊಡತಿ' ಎಂದು ಕೇಳುವನಾತ
ಬಾ—ಪೋಪ—ಸುಮನೆಯ ಬಳಿಗೆ—
ನಮಗಿಂತ ಹಿರಿಯಾಕೆ; ಈ ಹೊಸಬನ್ನ
ಕೇನಾದರೊಂದು ಮದ್ದರೆವ ಬಗೆಯ ಕಾಂಬ.
ಈ ತೆರನ ಬದುಕಿಗಿಂ ಸಾವು ಲೇಸು.
ಈ ಸುಳ್ಳು ಗುಡಿಯನ್ನು ಮುರಿದಿಕ್ಕಿ ನಾವಿನ್ನು
ತಿರುಗಿ ಕಾಡನು ಪುಗುವ ಬಗೆಯೆಲೇಸು!

**ಸುರಮೆ:—** ಬಾ-ಸುಜಲೆ. ಅದೆ ಕ್ಷೇಮ.
ಸುಮನೆ ಎಂತೊರೆವಳೋ ಅದನನಾಲಿಸಿ ಬಳಿಕ—

[ಸೇನಾನಿ, ಕವಿ, ಕೃಷಿಕ—ಈ ಮೂವರು ಅಲ್ಲಿಗೆ ಬರುವರು.]

**ಕವಿ:—** ನಿಜ! ಬಾಯ್ಬಿಟ್ಟು ಕೇಳುವ ಇಂದು.
'ತಪ್ಪಾಯ್ತು ಕರೆತಂದು ನಿಮ್ಮನ್ನು;
ಉಪಚರಿಸಿ ಸಾಕಾಯ್ತು!
ನಿಮಗು ಇಲ್ಲವು ತೃಪ್ತಿ; ನಮಗಿಲ್ಲ ಮೊದಲೆ ಸುಖ!'

**ಸೇನಾನಿ:—** ಕುಪಿತರಾಗರೆ ಅವರು!

**ಕೃಷಿಕ:—** ಆಗುವರು—ಆದರೇನ್?

**ಸೇನಾನಿ:—** ಆದರೋ—ನಮ್ಮ ಬಿಟ್ಟಿದ್ದು ಹೊರಟರೇನ್ ಗೈವೆ!
ಮೊದಲ ಬರಿಯ ಬಾಳ್ ಮರವೆಯಾಯ್ತೆ?
ಈಗ ದಣಿವ ಜೀವಕ್ಕೆ—ಹೊಗಳ್ಳುದಾದರು ಬೇಕು!
ಅವರ ಮುಖವನು ಕಂಡು ಮನಕೊಂದು
ಸಂತಸವಾದರುಂಟು!

[ಈ ಕಡೆಯಿಂದ ಮೂವರು ಗೆಳತಿಯರು ಬಂದು ಎದುರಾಗುವರು.]

**ಸುಮನೆ:—** ಏನ್ ಸಂಚೋ—ಮೂವರೂ ಕೂಡಿಹರು!
ಮೂವರೂ ಸೇರಿಹರು!
ಅವರು ಗುಡಿಗಳ ಬಿಟ್ಟುದಿದೆ ಪ್ರಥಮ ದಿನವಿಹುದು.

**ಸೇನಾನಿ:—** ನಮ್ಮ ಗಮನವ ಅರಿತು ಕುಪಿತರಾದರೊ ಏನೊ!

**ಕೃಷಿಕ:—** ತಾಳ್ಮೆಗೆಟ್ಟಂತಿಹಳು -ನನ್ನ ಸುಜಲೆ; ನನ್ನ ಒಡತಿ!
ಇನ್ನೇನಪಾಯವೋ ಕಾಣೆನಮಮ.
(ಅವರು ಸಮೀಪಿಸಲು)

**ಕವಿ:—** ತಪ್ಪಾಯ್ತು—ನಮ್ಮಿಂದ!

**ಸುಮನೆ:—** ತಪ್ಪಾಯ್ತು ನಮ್ಮಿಂದ!
ಹೊಗಳಿಕೆಗೆ ಮನಸೋತು—ಮೂರ್ಖರಾದೆವು ಅಂದು!
ನಮಗೇಕೆ ಹೊಗಳಿಕೆಯು?
ಗೆಳೆತನದಿ, ಅಂತರಂಗದ ಗೆಳೆತನದಿ ಸುಖವೆಂದು
ಅರಿತು ಬಂದೆವು ನಾವು! ಮೋಸವಾಯ್ತು!
ಇದು ಅಂತರಂಗ, ಅಂತಃಕರಣವಿಲ್ಲದೂರು!
ಮನಸಿನೊಳಗಿಹುದೇನೋ! ನುಡಿವುದೇನೋ!

**ಸೇನಾನಿ:—** ತಪ್ಪಾಯ್ತು ನಮ್ಮಿಂದ!
ನಿಜವ ಪೇಳಲೆ ನಿಮಗೆ—ಏನೊ ಕೊರತೆಯು ನಮ್ಮ
ಜೀವನದಿ ಅನಿಸಿತ್ತು! ನಿಮ್ಮಗಳ ಕಾಣುತಲೆ
ಅದುವೆ ನೀವಿಹಿರೆಂದು—ತಿಳಿದು ಕರೆದೆವು ನಿಮ್ಮ
ಪೊಂದಿ ಸುಖಿಪೆವು ಎಂದು

**ಕೃಷಿಕ:—** ನಿಜ, ಸೇನಾನಿ ವೀರ, ಸಟೆಯಾಡ್ವನಲ್ಲ!

ಹೊಗಳಿಸಿ ಕೊಂಡವ; ಹೊಗಳ್ವನಲ್ಲ.
ಸುಜಲೆ—ನಿನ್ನ ಗೆಳೆತನದಿಂದ ಸುಖವು ದೊರಕುವುದೆಂದು.

**ಸುಜಲೆ:—** ಗೆಳೆತನವೆ! ಎಲ್ಲಿಂದ ಬಂದಪುದು?
ಗೆಳೆತನವ ಬಯಸಿದಿರಾ—ಒಡತಿ ಪಟ್ಟವಕಟ್ಟಿ!

**ಕೃಷಿಕ:—** ಮುನಿಸುಗೊಂಡತಿಹುದು!
ಮಾತುಕಾಣದ ಮುನಿಸು, ಮುಖವಸುರಿಸುತಲಿಹುದು!
ಮನದ ಕುದಿಯನು ತಣಿಸೆ, ಕಂಬನಿಯೆ ತಕ್ಕ **ಮಳೆ.**

**ಸುಮನೆ:—** ಸಿಟ್ಟಿಲ್ಲ, ಕೃಷಿಕ; ಸಿಟ್ಟಿಲ್ಲ.
ಈ ಪರಿಯ ಜೀವನದಿ—ನಿಮಗಿಲ್ಲ ಸುಖ
ನಮಗಿಲ್ಲ ದುಃಖ.
ಬೇಡವೀ ಬಾಳ್ವೆ; ಪೋಗುವೆವು ನಾವ್ ನಮ್ಮನೆಲೆಯ ಬಯಸಿ!

**ಕವಿ:—** ಅಗಲುವಿರಾ! ಆಕಾಶವೇ ಕಳಚಿ ಬಿತ್ತು!

**ಸುಮನೆ:—** ಮೊದಲ್ ಸ್ವರ್ಗ ಬಿದ್ದಿತ್ತು!
ಹೀಗೆ ಕೂಡಿರೆ ನಿಮ್ಮ—ಜೀವನವೆ ಕಳಚಿಬೀಳುವದಯ್ಯ.
ಓ ಕವಿಯೆ! ಅಂತೆ ಕರೆಯಲು ಬೇಕು,
ಮಾತೊಂದ ಅರುಹಲೆಂದಿಲ್ಲಿಗೈತಂದೆವು!

**ಕವಿ:—** ಸಂಧಾನಕೆ?

**ಸುರಮೆ:—** ಸಂಧಾನವೆಲ್ಲಿ! ಸೋತವರು ಕಾಣಿಸರು, ಗೆದ್ದವರು **ಕಾಣಿಸರು!**

**ಸೇನಾನಿ:—** ನಿಜದ ಮಾತಿದು ರಾಣಿ!

**ಸುರಮೆ:—** ಬೇಡಿನ್ನು ರಾಣಿತನ

**ಸುಜಲೆ:—** ಬೇಡಿನ್ನು ಒಡತಿಪಟ್ಟ

**ಸುಮನೆ:—** ನಾವ್ ಕೋರುವೆವು ಗೆಳೆತನವ....
ಗೌರವ, ಆದರ, ಉಪಚಾರ, ಪೂಜೆ—ಸ್ತುತಿಗಳು **ಬೇಡ!**
ಬೇಕೆಮಗೆ ಮಮತೆ, ಪ್ರೇಮ, ಪ್ರಣಯಗಳು!
ನಿಮ್ಮರ್ಧವೆಂದೆಮ್ಮ ಗ್ರಹಿಸಿದರೆ ಒಳಿತಾಯ್ತು!
ಇಲ್ಲವಾದೊಡೆ ಶೀಘ್ರ ತೆರಳಲಿಹೆವು!
ಸಾಕು—ದೇವಿಯಪಟ್ಟ . . . .
ದೇವಿಯರು ನಾವಲ್ಲ. ನಿಮ್ಮಂತೆ ಜೀವರ್ಗೆ

**ಕವಿ:**— ನಿಜ! ಈ ಮಾತು ನಿಜ ಸತ್ಯ!
ನಾರಿಯೆಂಬಾಕೆ ತಾನ್ ಪುರುಷ ಜೀವದ ಅರ್ಧ;
ಪುರುಷ ನಾರಿಯ ಅರ್ಧ; ಇವರು ಕೂಡಿರೆ
ಮಾತ್ರ—ನಿಜ ಜೀವ! ಸಂಧಾನ!

**ಸುಮನೆ:**—ಸಂಗರವು ಇಲ್ಲದಲಿ ಸಂಧಾನವೇನು?

**ಕವಿ:**— ಸಂಯೋಗ!

**ಸುರಮೆ:**— ಕೊಳ್ಳಿರೆಮ್ಮೆಯ ಕರವ! "ನಿಮ್ಮಂತೆ ನಾವ್,
ನಮ್ಮಂತೆ ನೀವ್" ಎಂದಭಯವಿಡಿರಿ!

(ಅಭಯವಿಡುವರು)

[ಸಮಾನ ಸ್ಥಿತಿಯಿಂದ ಕೈ ಕೈ ಹಿಡಿದುನಿಲ್ಲುವರು]

**ಕೃಷಿಕೆ:**— ನನ್ನೊಡತಿ!

**ಸುಜಲೆ:**— ಬೇಡವಾ ಮಾತು! ನಿನ್ನೊಡತಿಯಲ್ಲವು ನೋಡು
ಬರಿಯ "ಗೆಳತಿ". . .
ಗೆಳೆಯ ಗೆಳತಿಯರೆನಿಸಿ ಸಂಸಾರ ಸಾಗಿಸುವ!
ನಾವ್ ಗೈದ ಗುಡಿಯೊಳಗೆ ಜತೆಯಾಗಿ ಕುಳಿತಿರುವ.



## ಅಂಕ ೩.

[ಕವಿಯು ಒಬ್ಬನೇ ಬೇಸರದಿಂದಿರುವನು....]

**ಕವಿ:—** ವರುಷವಾಯ್ತೆರಡೀಗ, ಯುಗವೆರಡು ಸಂದಂತೆ
ಕಾಣುತಿಹುದು—ಈಗಷ್ಟೆ ವಿಜಯ ದೊರಕಿತು ನೋಡಿ.
ಎರಡು ಯುಗಗಳ ಸೆಣಸು!
ನಾರಿಯೊಬ್ಬಳ ತಂದು, 'ದೇವಿ'ಯೆಂದುಬ್ಬಿಸುತೆ
ಹೊಗಳಿ, ಪೂಜೆಯ ಗೈದು ಬೇಸರಾಯ್ತು;
ಕಾವ್ಯ ಶಿಲ್ಪದ ಚತುರತನಗಳವು ಬರಿದಾಯ್ತು
ಹೊಗಳಿ ಬೇಸರ ಬರಿಸಿ, ಅರ್ಘವೆಟ್ಟಿಲ ಇಳಿಸಿ—
ದೇವಿಯನು ಗೆಳತಿಯಾಗಿಸಿ ಕೊಂಡೆ!

**ಸೇನಾನಿ:—** ಗೆಳತಿಯಾಗಿಸಿಯಾಯ್ತು! ನಿಜ ಗೆಳತಿಯೇನು?
ನೋಡೆನ್ನ ಕವಿ........!
ಸ್ತ್ರೀ ಯೆಂಬ ಈ ಜೀವಿ ಎಮ್ಮರ್ಧವೆ?
ಏನಿಹುದು ಆಕೆಯೊಳು! ಪೌರುಷವೆ? ಇನಿತಿಲ್ಲ!
ಕಾದಾಡುವಾಕೆಯು ಅಲ್ಲ! ಕತ್ತಿಯೆತ್ತುವ ಕ್ಷಾತ್ರವಿಲ್ಲ!
ಬದಲು ಕಡಿದಾಡುವಾಕೆ ಅವಳು!
ಕೋಮಲೆಯು ಆಕೆಯೆಂದೆನಿಸಿ ಪೂಜಿಸಿದೆ!
ಆದರೂ—ಎನಗಿಂದು ತೋರುತಿದೆ!
ನಾರಿ—ಈ ಜೀವನದ ಅರೆಪಟ್ಟಕೆನಿಸಿದವಳಲ್ಲ!
'ದೂರ ಕಾಣುವ ಬೆಟ್ಟ ನುಣ್ಣಗೆಂಬಂತಿಹಳು' ನಾರಿ!
ಅರ್ಧಾಂಗಿಯಾಗುವೊಡೆ—ಏನೇನು ಥರವಲ್ಲ!
ಬರಿ ಮುಳ್ಳು ಕಲ್ಲು!
ಜಗವ ಜಯಿಸಿದ ಸೇನಾನಿ ನಾನು;
ಸಾವಿರರ ಗೆಲಿದವನು;
ಸಾಮಂತರೆನ್ನಯ ಪಾದಪದ್ಮಗಳ ನಮಿಸಿದರು;
ಈ ನಾರಿ—ನನಗೆ ಸಮವೆ!
ನನ್ನ ಪೂಜೆ ಸಂಭಾವನೆಯು ತನ್ನ ಕರ್ತವ್ಯ
ವೆಂದರಿಯಬೇಡಾ.

**ಕೃತ್ತಿಕೆ**:— ಎಂಪರಿಯು ಬೇಡಾ!
ನೀ ಮರುಳು ಸೇನಾನಿ; ನಾನೂ ಇಹೆನಂತೆ.
ನಿಜಕು ನಾನೆಂಬೆ—ನಾರಿಯೊಳಗಿಹುದೇನು?
ಚೆಲುವೆ! ಎಲ್ಲಿ ಚೆಲುವಿಲ್ಲ?
ಬಂದಷ್ಟು ಚೆಲುವು ಈಗಿಲ್ಲವಾಕೆ!
ಮೊದಲು—ಒಡತಿಯಾಗಿರ್ದಷ್ಟು ದಿನ, ನಾನೆ ಮೂರ್ಖ,.
ಈಗ ಗೆಳತಿಯಾಗಿರಲು ಅದುವೆ ಪಾಡು.
ಉಪಚರಿಸಿದಳು ನಾಲ್ಕು ದಿನ,
ಈಗ ತಾನಾಯ್ತು, ತನ್ನ ಮಗುವಾಯ್ತು!
ಉಪಚಾರ, ಆದರವು ಮಗನಿಗೇ!
ನನ್ನ ಕಷ್ಟವ ಕಂಡು,
"ಛೇಪಪ್ಪ, ನನಗಾಗಿ ಹಗಲಿರುಳು ದುಡಿಯುತಿಹೆ
ನಿನ್ನುಪಕಾರವಿಷ್ಟೆನಲಿ" ಎಂಬ ನುಡಿ ಬೇಡಾ!
ಅಬ್ಬ, ನಾರಿಯೆಂಬಾಕೆ ಚೆಲುವು ರೂಪದಮಾರಿ!
**ಸೇನಾನಿ**:—ಚೆಲುವೇನು! ದಿವಸಗಳು ಸಂದಂತೆ—
ಚೆಲುವು ಸರಿಯುವುದದರ ಬೆನ್ನ ಹಿಂದೆ!
ಆಗ ಉಳಿವುದು—ನಾರಿ; ಸಂಸಾರಕಿಹ ಮಾರಿ.
ಕವಿ:— ಎಷ್ಟು ಚತುರೆಯು ನೋಡು ನಾರಿಯೆಂಬವಳು!
ಮೊದಲೆಷ್ಟು ರಮಣೀಯ ಬನದಂತೆ ಕಾಣಿಸುತೆ—
ನವಿಲಂತೆ ಕುಣಿಯುತ್ತೆ ಮನಕೆ ಮಂಕನು ಬಡೆದಳು
ಮಂಕಿಂಗೆ ಬಲಿಗೈದು—ಪೂಜೆಯನು ಕೊಂಡಳೈ.
ಕೊನೆಗೆ ತನ್ನಯ ಆಟ ಮುಂದೆ ಸಾಗದು ಎಂದು
"ನಾ ನಿನ್ನ ಗೆಳತಿ"—ಎಂದಳು ನೋಡಿ!
ಎಲ್ಲಿನದು ಗೆಳೆತನವು!
ಪತಿಯ ಹೊಗಳಳು ಆಕೆ, ನಾವೆ ಉಪಚಾರಕ್ಕೆ.
ನಿಜಕು ನಾನೆಂಬೆನೈ! ನಾರಿಯೆಂಬವಳವಳು ಮೋಟಗಾತಿ
ಅವಳ ಮನವೊ—ಬಲು ಚಪಲ! ಕಣ್ಣಂತೆ ಮನ!
ಬಲದಿ ಪಿಡಿವಂತಿಲ್ಲ, ಹಾಗೆ ಬಿಡುವಂತಿಲ್ಲ!

ಮುಳ್ಳು ಕೇದಗೆ ಹೂವು!
ಬೆಲ್ಲದೊಳ್ ಬೆರೆತರ್ಜೇವು!
ಏಕೆ—ಅರಸಿನದ ಹಾವು!

**ಸೇನಾನಿ:**—ಏಸಿಸ್ನು—ನಾನೆಂದಿಹೆನವಳ್ಗೆ!
ಗೆಲುವು ತ್ರಾಣವು ಇಲ್ಲ ನಿನಗೆ!—ನೀನೆನ್ನ ಕಾಮದರಸಿ!
ಪತಿಯೆ ಸದ್ಗತಿ ನಿನಗೆ; ಪತಿಯೆ ಸರ್ವಸ್ವ!
ಅವನ ನೆಳಲಲಿ ನೀ ಬೆಳೆಯಬೇಕು.

**ಕೃಷಿಕ:**— ನಾನು ಅಂತೆಯೆ!
ದುಡಿವಾಕೆ ನೀನಲ್ಲ, ಅನ್ನದಾತನು ನಾನು!
ನನ್ನ ಮನೆ ಹಸುವೆಂತೊ, ನೀನು ಅಂತೆ!
ಉಡ, ಉಣಲು ಕೊರತೆ ಇಲ್ಲದ ತೆರದಿ
ನಡೆಸಿಪ್ಪೋಪೆ! "ಬಾಳು, ಇಲ್ಲವೆ ಬೀಳು"—ಎಂದೆ

**ಕವಿ:**— ಸಮನಾಯ್ತು........
ನಿಜ, ನಾರಿಯೆಂಬಾಕೆ ಬಲು ಕೋಮಲದ ಜೀವ;
ಆಸರೆಯ ಗಿಡವಿರದೆ ಬದುಕದಾ ಬಳ್ಳಿ·
ನಾರಿ, ನಿನ್ನಯ ಮನವು ಬಲು ಚಪಲವಿಹುದು!
ಸ್ವಾತಂತ್ರ್ಯವದಕೆಂದು ಸಲ್ಲದಿಹುದು.

**ಕೃಷಿಕ:**— ಸೋತೆವ್ವೈ ಬಂದು.

**ಸೇನಾನಿ:**—ಸೋತು ಚೇತರಿಸಿದೆವು!

**ಕವಿ:**— ಚೇತರಿಸಿ ಗೆದ್ದು ಆಯ್ತು!

[ಅವರು ಹಿಗ್ಗಿನಿಂದ ಹೊರಡುವರು. ಅಲ್ಲಿಗೆ ಆ ಮೂವರು ಗೆಳತಿಯರು ಆಗಮಿಸುವರು.]

**ಸುಜಲೆ:**—ಸುರಮೆ ನೀ ಬಂದೆ ಹೇಗಮ್ಮ ಮನೆಯಬಿಟ್ಟು?
ಪತಿಯು ಎನಲಿಲ್ಲವೇ 'ಅಲೆಯ ಬೇಡೆಂದು!'
ಪರರ ದೃಷ್ಟಿಗೆ ನೀ ಬೀಳ್ವೆಯೆಂದು?
ನಿನ್ನ ರಕ್ಷಕನವನು ಬಳಿಯೊಳಿರ ಬೇಕೆಂದು!

**ಸುರಮೆ:**—ನಿನ್ನ ಕಾಣಲು ಬಗೆದೆ, ನೀನಾದರೂ ಸುಖಿಯೊ,—
ತಿಳಿಯ ಬಂದೆ.

**ಸುಜಲೆ:**—ನೋಡ್ ನಾ ಸುಖಿಯೆ! ಏಸು ಬೇಕಾದಷ್ಟು ಮಕ್ಕಳಿಹರು!
ಏಸು ಬೇಕಾದಷ್ಟು ಚಿನ್ನವಿಹುದು!
ಬೆನ್ನು ಮುರಿಯುವ ತನಕ ಕೆಲಸವಿಹುದು!
ಬೇಸರಾಗಲು ಬೇಕು—ವ್ಯವಧಾನ.
ವ್ಯವಧಾನವೇ ಇಲ್ಲ ಈ ಜೀವಕ್ಕೆ!
'ಸತಿ'ಯೆಂಬರಲ್ಲ!
ಸತಿಯೆಂದರಿವರಂತೆ ಇರಬೇಕು ಪತಿಯ ದಾಸಿಯ ಕೆಲಸ!
ನೀನ್ ಸುಖಿಯೆ ರಾಣಿ?

**ಸುರಮೆ:**— ನಾನೆಲ್ಲಿ ರಾಣಿ?
ನಾನೊಂದು ಗೊಂಬೆ, ಪತಿಯ ಪಾಲಿಗೆ ರಂಭೆ,
ಕಾಮಮಯ ಕರಕೊಂದು ಸಿಂಬೆ!
ನಾ ಕೋಮಲೆಯು!

**ಸುಮನೆ:**—ಅಷ್ಟೇನೆ ತಾಯಿ. ಚಂಚಲೆಯು, ಚಪಲೆಯು, ತೆರತೆರನ
ಅಲೆ ಅಲೆಯು—ಕೂಡಿ ತಾ ಹೆಣ್ಣು, ಸಾಗರವಾಯ್ತು.
ಸಂಸಾರ ಸಾಗರವೆ ಈ ನಾರಿಯೆಂಬುವ ಜೀವ.
ಅದರ ಹಿಚುಕುತೆ ಮಿಸುಕಿ ಮುಂದರಿವುದೇ ತಪವು.
ಆದ ಗೈದ ಪುರುಷನಿಗೆ ಬಾಳ್ವೆ.
ನೋಡಿ--ನಾರಿಯೆಂಬಾಕೆ, ಪಾಪವೆಷ್ಟಿಹುದೋ, ಈ ಜಗದಿ
ಅದಕೆಲ್ಲ ಕೈಕಂಬ.
ಎಲ್ಲ ಪಾಪಕೆ ನಾರಿತಾನ್ ಬೇರು, ತಾನ್ ಗಿಡವು,
ತಾನ್ ಫಲವು!
ಪಾಪ; ಫಲಉಣುವಕೆಲಸವಿಷ್ಟೆ ಇಹುದು ಪುರುಷ ಸಿಂಹಂಗೆ!
ತಾಯಿ, ಬಾಳು ಬರಿದಾಯ್ತು!
ನಾವಂದು ಇಳಿದುದೇ ಮೃತ್ಯು!

**ಸುಜಲೆ:**— ನಿಜ ಅಕ್ಕ, ಎಂದು ಒಡತಿಯ ಪಟ್ಟವನು ತುಳಿದು
ಕರವವನು ನೀಡಿವೆವೊ, ಚತುರ ಮಲ್ಲಗೆ ಕೈಯ
ಕೊಟ್ಟಂತೆ ಆಯ್ತು—
ಜಗ್ಗಿದನು ಕರವವನು; ಬಗ್ಗಿತಾಗಲೆ ಜೀವ!

**ಸುರಮೆ:**— ಈಗೇನು ತಾಯಿ! ಈ ಬಾಳ್ವೆ ಬೇಕೆ?
ಬದುಕುವ ಗತಿಯಿಲ್ಲ!

**ಸುಜಲೆ:**— ಬೇಕೋ ಬೇಡವೊ, ತಿಳಿಯೆ!
ನೆರಿಯಾಯ್ತು ಮುಖವೆಲ್ಲ; ಮನೆತುಂಬ ಮಕ್ಕಳಲ್ಲ!
ಶಕ್ತಿಯನು ಗಳಿಸಿಲ್ಲ! ಒಡಲಜಲ ಬತ್ತಿತಲ್ಲ!

**ಸುರಮೆ:**— ನಾವ್ ಕೋಮಲರು! ಅದರಿಂದಲೀಬಾಳು ಮುಣುಗಿದಂತೆ

**ಸುಮನೆ:**— ಎದ್ದೇಳು ತಾಯಿ!
ಸಾಕಿನ್ನು ದಾಸಿತನ, ಸಾಕಿನ್ನು ನಯವಿನಯ;
ಕೇಳಲಿಲ್ಲವೆ ನೀನು—ಗಂಡುಸರ ಪೌರುಷವ!
ಸೃಷ್ಟಿ, ಸ್ಥಿತಿ, ಲಯಕೆಲ್ಲ ಅವರೇ!
ಅವರ ಮಡದಿಯರೆಲ್ಲ, ತಂತಿ ಮಿಡಿಯಲಿಕಂತೆ!
ಸೀರೆ ಆಭರಣಗಳ ಪೊರಲಿಕಿಪೆರಂತೆ!
ಸರಸತಿ, ಲಕ್ಷ್ಮಿ, ಉಮೆಯರು—ಅಂತೆ ಇರಲಿ!
ಪತಿಯ ತೊಡೆಗನಸೇರಿ ಗೊಂಬೆಯಾಗಿರಲಿ!
ಬಾ—ಬಾ ಬಳಿಗೆ!

**ಸುರಮೆ:**— ಬಂದೇನು ತಾಯಿ!

**ಸುಜಲೆ:**— ಮುಂದೇನು ತಾಯಿ!

**ಸುಮನೆ:**—ಮುಂದೇನು! ಪುನರ್ಜನ್ಮ! ಈ ಬಾಳ್ಗಿದುವೆ ಕೊನೆ!
ಹೊಸಯುಗವ ಬರಗೊಳಿಪ!
ಒಂಟಿ ದೇವನು ಸೇರಿ ಕೈಲಾಗದೊಂದು ದಿನ
ತ್ರಿಮೂರ್ತಿಗಳಾದರಂತೆ!
ದೇವಿಯರಿಗೆ ನಿಲ್ಲ ಪೌರುಷವು
ಬಾ— ತ್ರಿಶಕ್ತಿ ಪಿಯೂಷ!

**ಸುರಮೆ:**— ತ್ರಿದೇವಿ!

**ಸುಜಲೆ:**— ತ್ರಿದೇವಿ!

[ಮೂವರು ಮಿಲನರಾಗಿ ತ್ರಿದೇವಿಯ ರೂಪ ತಾಳುವರು. ಮೂರು ತಲೆ, ಆರು ಕೈಗಳ ಘೋರ ರೂಪವನ್ನು ತಾಳುವರು. ಅಲ್ಲಿಗೆ ಹಿಗ್ಗಿಸಿಂದ ಕವಿ, ಸೇನಾನಿ ವೈತರ ಆಗಮನ.]

ಕವಿ:— ಕವಿಯ ಬಣ್ಣನೆ, ಬಲವು
ಸೇನಾನಿ:— ಕ್ಷಾತ್ರ ತೋಳಿನ ಬಲವು
ಕೃಷಿಕ:— ದುಡಿವ ಕೈಗಳ ಬಲವು!
ಬಲ್ ಬಲುಹು, ಬಲ್ ಬಲವು!
[ಎದುರಿನ ತ್ರೈದೇವಿಯನ್ನು ಕಂಡು ಬೆದರಿ.]
ಕೃಷಿಕ:— ಅರೆ, ಸುಜಲೆಯೇನು!
ಸೇನಾನಿ:— ಮೂರು ಮುಖ, ಆರು ಕೈ, ಈ ಘೋರ ರೂಪೇನು!'
ಕವಿ:— ಮೂರೆಲ್ಲಿ! ನನ್ನ ಕಣ್ಣಿಗೆ ಕಿಡಿಕಾರ್ವ ನೂರು ಮುಖ!
ಆರಲ್ಲ—ಸಾವಿರದ ಆರು ಕೈ ಕಾಂಬುದಲ್ಲ!
ಈ ಘೋರ ರೂಪೇನು?
ಇದು ಹೆಣ್ಣೆ!
ಹೆಣ್ಣಲ್ಲ—ಬಣ್ಣನೆಯ ಮೀರ್ವ ಗಂಡಿನ ಗಂಡು!
ಅದೋ—ನೋಡು ಸೇನಾನಿ........
ಸೇನಾನಿ: —ಅದೊ ಓಡು—ರೈತ
ಕೃಷಿಕ:— ಅದೊ—ಜೇಡಿರೆಲ್ಲ! ಓಡಿ ಪಾರಾಗುವಂತಿಲ್ಲ!
ದೇವಿ ಮುಂದಕೆ ಮಣಿದು "ದೇಹಿ" ಎನ್ನಿರೆಲ್ಲ.
ಓ ತಾಯಿ, ಮಾತಾಯಿ!
ಓ ಕಾಳಿ, ಮಾಕಾಳಿ!
ಕವಿ:— ತಾಯಿ! ಎಲ್ಲಿಂದ ಬಂದೆ?
ಏನಿದೀ ಉಗ್ರ.
ಸೇನಾನಿ:—ಏನಿದೀ ಉಗ್ರ—ನೋಡಲಾರೆ
ಜಗವ ಜಯಿಸಿದ ಎದೆಯು ನಡುಗುತಿಹುದು!
ಕೃಷಿಕ:— ಬೇಡುವೆನು; ಗುಡಿಕಟ್ಟಿ ಪೂಜಿಸುವೆ!
ತ್ರೈಕಾಳಿ:— ಪೂಜೆ, ಓಟಗಳೆರಡು ವ್ಯರ್ಥ!
ನಾರಿ ಬೆನ್ನನು ಮುರಿದ
ಪುರುಷಸಿಂಹನ ಬೆನ್ನು
ಬಗ್ಗಲೇ ಬೇಕು!
[ಮೂವರು ಉದ್ದಂಡ ನಮುಸ್ಕರಿಸುವರು]

# ಪಾತ್ರ ಪರಿಚಯ

**ಸ್ಥಳ:—** ಯುರೋಪಿನ ಮತ್ತು ಪ್ರಪಂಚದ ವಿವಿಧ ಅರಣ್ಯಗಳಲ್ಲಿ.

**ಪ್ರಾಣಿವರ್ಗ:—**ವಿವಿಧ ಜನಾಂಗಗಳ ಸಾಂಕೇತಿಕ ರೂಪಗಳು.

## ಮುಖ್ಯ ಪಾತ್ರಗಳು:

**ತೋಳ:—** ಜರ್ಮನಿ.

**ಕಿರುಬ:—** ಇಟಲಿ.

**ಚಿರತೆ:—** ಜಪಾನು.

**ನರಿ:—** ಬ್ರಿಟನು.

**ನಾಯಿ:—** ಫ್ರಾನ್ಸ್.

**ದನ:—** ಚೀನ.

**ಕರಡಿ:—** ರಸ್ಯ.

**ಸಿಂಬ:—** (ಸಿಂಹ, ಸಿಮ್ಮ) ಸಂಯುಕ್ತ ಅಮೇರಿಕ.

## ಇತರ ಪಾತ್ರ ವರ್ಗ:

**ಮೊಲ:—**ಜೆಕೊಸ್ಲೊವಾಕಿಯ, **ಟರ್ಕಿಕೋಳಿ:—ಟರ್ಕಿ.**

**ಕೋಳಿ:—**ಪೋಲೆಂಡ್. **ಬೆಕ್ಕು:—**ಪರ್ಸಿಯಾ.

**ಕುರಿ:—**ಹಿಂದುಸ್ಥಾನ.

**ಕಂಗಾರು:—**ಆಸ್ಟ್ರೇಲಿಯ. ಇತ್ಯಾದಿ, ಇತ್ಯಾದಿ.



## ಅಂಕ ೧.

[ಅರಣ್ಯವೊಂದರಲ್ಲಿ ಪಶು ಪ್ರಾಣಿಗಳೆಲ್ಲ ಮಲಗಿವೆ. ಎಚ್ಚತ್ತ ಒಂದು ತೋಳ, ಉಳಿದವರ ನಿದ್ರೆಯನ್ನು ಕಂಡು . . .]

**ತೋಳ:—** ಕೇಳಿಸದೇನು—ತೋಳನ ಕೊರಳು?
ನನಗೇಕಿಲ್ಲ ಹೆಮ್ಮೆಯ ಬಾಳು?
ಕಾಯಿಲೆ ಬಿದ್ದ ಜರ್ಮನ್ ತೋಳ
ನಿರ್ಬಂಧ ಕಡಿದಿದೆ—ಮುರಿದಿದೆ ಕೋಳ!
ಅಬ್ಬಾ—ಬೇಟೆಗೆ ಜಾಗವೆ ಇಲ್ಲ;
ನಿದ್ದೆಗೂ ಕೂಡ ಶಾಂತಿಯು ಇಲ್ಲ!
ನೆರೆಕರೆ ಮನೆಯಾ ಮೊಲ ಕೋಳಿಗಳೇ,
ಮರಿಗಳ ನೀಡುತ, ಇರಿ, ರಾಜಿಯೊಳೆ!

**ಕಿರುಬ:—**(ತಾನೂ ಎದ್ದು ಆಚೀಚೆ ಕಂಡು)
ಕೇಳಿದೆ ತೋಳ ನಿನ್ನೀ ಗೋಳ.
ನನಗೂ ನಿನಗೂ ಹಗೆಗಳೆ ಬಹಳ,
ಆ ಕಡೆ ಕಂಡರೆ ಕರಡಿಯ ಭೀತಿ;
ಲೋಕದಿ ತುಂಬಿದೆ ನಾಯ್ನರಿ ಕೀರ್ತಿ,

**ತೋಳ:—** ಕತ್ತೆತ್ತೀ ಕಿರುಬನೆ ಕೇಳು!
ನಂದೇ ಮಂತ್ರವ ಹೇಳು!

**ಕಿರುಬ:—** ಕೂಡಿಸಿ ಹಾಡುವ ಒಂದೇ ಮಂತ್ರ
ಹಂಚಿಕೆ ಹೂಡುವ ಒಂದೇ ತಂತ್ರ!

**ತೋಳ:—** ಅಂತಿರೆ ಕೂಡು—ಬೆನ್ನಿಗೆ ಬೆನ್ನು!
ಆಪದ್ಧರ್ಮಕೆ—ಎಲ್ಲಿದೆ ಸಿನ್ನು (sin)?
ತೋಳಗು ಕಿರುಬಗು ಪ್ಯಾಕ್ಟು (pact)
ಜಗಕ್ಕೆ ತಿಳಿಯಲಿ ಫ್ಯಾಕ್ಟು (fact).

**ತೋಳ, ಕಿರುಬ:**—(ಸೇರಿ ಹಾಡುತ್ತ ಕವಾಯತು ನಡೆಯಿಸುವುವು.)

ನಮ್ಮಯ ಮಕ್ಕಳಿಗನ್ನವೆ ಇಲ್ಲ!
ಬೇಟೆಗೆ ಕಾಡೇ ಇಲ್ಲ!
ಲೋಕದಿ ಕಾಡಿಗೆ ದಿಕ್ಕೇ ಇಲ್ಲ;
ಆದರು ಊಟಕೆ ಇಲ್ಲ.
ಲೆಪ್ಟ್ ರೈಟು ಲೆಪ್ಟ್ ರೈಟು,
ತೋಳ ಕಿರುಬನ ಪ್ಯಾಕ್ಟ್!
ರಷ್ಯನ್ ಕರಡಿಗೆ ಕಣ್ಣಿಟ್ಟು—
ಎಲ್ಲರು ಸೇರಿರಿ ಸವ್ಕೊಟ್ಟು.

[ಗದ್ದಲಕ್ಕೆ ಒಂದೊಂದಾಗಿ ಎಚ್ಚರಗೊಳ್ಳುವ ಯುರೋಪಿನ ಮೃಗಗಳು.]

**ನರಿ:**— (ಆತ್ಮ) ಕರಡಿಯ ಮೇಲಿನ ಈ ಸಿಟ್ಟು
ಹೆಚ್ಚುತಲಿರಲಿ—ಸುಖವುಂಟು! (ಮಲಗುವುದು)

**ಮೊಲ:**— ಅಯ್ಯೋ ಕಾಲಿ (Collie) ನಾಯಿ,
ಕೇಳಿದ್ಯ ತೋಳನ ಬಾಯಿ?
ಹೀಗೆಯೆ ಆದರೆ ಮುಂದೆ
ಎಲ್ಲಿನ ಶಾಂತಿ—ಎಂದೆ?

**ಕೋಳಿ:**— ಪೋಲಿ ಹೇಳದು ಈ ಕೋಳಿ,
ಕೇಳುತಲಿಹುದು ರಣಗಾಳಿ!
ತೋಳನ ಕಣ್ಣೇ ನನ್ಮೇಲೆ!

**ನಾಯಿ:**— ಗೌ—ಗೌ—ಗೌ—ಗೌ—ಗೌ—ಗೌ.
ಕಿರುಬನ ತಂಟೆಗು ದೂರಿದ್ದೆ;
ತೋಳನ ಕಾಯಿಲೆ ನಂಬಿದ್ದೆ;
ಗದ್ದಲ ಹೆಚ್ಚಿ, ನನ್ನಿದ್ದೆ,
ಯಾಕೋ ಕೆಟ್ಟಿದೆ—ಏನ್ ಜಿದ್ದೆ?
ಗೌ—ಗೌ—ಗೌ— ಗೌ—ಗೌ—ಗೌ.

**ತೋಳ-ಕಿರುಬ:**—ಲೆಪ್ಟ್ ರೈಟು ಲೆಪ್ಟ್ ರೈಟು (ಗೀತೆ ಹಾಡುವರು)

**ನಾಯಿ:**— ಗೌ ಗೌ ಗೌ ಗೌ—ಗೌ ಗೌ ಗೌ-ಗೌ!

ಇಂಗ್ಲಿಷ್ ನರಿಯನು ಕೂಗಲೇ ಈಗ?
ನಂಬದಿದ್ರಾಗ. . . . ನಂಬಿದರೆ ಹ್ಯಾಗ?
ಗೌ ಗೌ ಗೌ—ಗೌ ಗೌ ಗೌ!

**ನರಿ:—** ಕಾಲಿ ನಾಯಿ ಕೂಗೇ 'ಗೌ ಗೌ ಗೌ!'

**ನಾಯಿ:—** ತೋಳ ಕಿರುಬನ ಪ್ಯಾಕ್ಟು—
ಗೊತ್ತೇ ಅದರ ಒಳಗುಟ್ಟು?

**ತೋಳ-ಕಿರುಬ:—** ಲೆಫ್ಟು ರೈಟು— ಲೆಫ್ಟು ರೈಟು—
ಬೆಡ್‌ಗೆ ಇಂದು ಗುಡ್‌ನೈಟು!
ಬೇಟೆಗೆ ಚಲೋ ಟ್ವೈಲೈಟು.

**ಮೊಲ:—** ಮನೆ ಮುಂದಿದೆ ಜರ್ಮನ್ ತೋಳ,
ಕಾಪಾಡಿರಣ್ಣ ಚಿಕ್ (Czech) ಮಕ್ಕಳ,

**ನಾಯಿ:—** ಕಾಣೋ, ಕೇಳೋ, ನರಿ.
ತೋಳವು ಸೊಕ್ಕಿದೆ ಬರಿ.
ಹಾಕಲೇ ಬೇಕು ಗುದ್ದು;
ಬಿಟ್ಟುದು ಆದರೆ ಪೆದ್ದು.

**ನರಿ:—** ಯಾಕೆ—ನಾಯಿಯೇ ಈ ಸಿಟ್ಟು?
ಹೋದದ್ದೇನು ನಮ್ಮ ಗಂಟು?
ಕರಡಿಯ ಮನೆಯು ಆಚುಂಟು;
ತೋಳವು ಬೆಳೆದರೆ ಹಿತವುಂಟು;
ಬಿಡು, ಚಿಂತೆ ಬಿಡು
ನನ್ನಲ್ ನಂಬುಗೆ ಇಡು.

[ಎಂದು ಸಂಧಾನಕ್ಕೆ ಹೋಗುವುದು]

ಹೊಣರ ತೋಳ-ಯಾಕೆ, ಏನು ಈ ಕೋಪ?

**ತೋಳ:—** "ಯಾಕೆ, ಏನು—ಈ ಕೋಪ:"
ಹೊಟ್ಟೆಗಿಲ್ಲ; ಬಲು ತಾಪ!

**ನರಿ:—** ಅಷ್ಟೇ ತಾನೆ, ಬಿಡು ಭೂಪ.
'ಎಲೋ ಬೆಪ್ಪೇ, ಮೊಲ,

ಸಣ್ಣವರಿಗ್ಯಾಕೋ ಛಲ?
ಒಂದೆರಡು ಮರಿ ಕೊಡು,
ಹುಟ್ಟುವೆ ನಾಳೆ; ಬಿಡು.

**ತೋಳ:**— (ಮೊಲದ ಮರಿಯನ್ನು ಕಿತ್ತೊಯ್ದು) ಬೇಷ್, ಬೇಷ್,
ಬೇಷ್. ಭೇಷ್, ಒಪ್ಪಿದೆ ಮಾತ!
ನ್ಯಾಯಕ್ ನರಿಯೇ ದೇವತಾ.

**ಕಿರುಬ:**— ಒಳ್ಳೆಯ ಹಂಚಿಕೆ, ತೋಳನ ರಾಜಿ!
ಕಿರುಬಗೆ ಏನಿದೆ—ಫಾಯಿದೆ? ಪ್ರೂಜಿ.

**ತೋಳ:**— ರೋಮನ್ ಕಿರುಬ ನೀನು;
ಬುದ್ಧಿಯೆ ಬೇಡವೇನು?
ತಾಳು, ತಾಳು, ನೋಡು,
ಸುತ್ತಲೂ ಚೆಲ್ಲುವೆ ಬಾಡು.
ಬೇಸರ ಬೇಡ—ಕವಾತು ಮಾಡು,
ಗಂಟಲ ದಾಂಧಲೆ ಹೊಡೇ ಹೊಡು.

**ತೋಳ-ಕಿರುಬ:**—ಲೆಪ್ಟ್ ರೈಟು ಲೆಪ್ಟ್ ರೈಟು.

[ಕವಾಯತು ನಡೆಸುತ್ತ ಕೋಳಿ ಮನೆಯನ್ನು ನುಗ್ಗುತ್ತವೆ.]

**ಕೋಳಿ:**— ಕೊ ಕೊ ಕೋ ಕೊ ಕ್ಕೊ ಕ್ಕೋ—ಕೊ ಕ್ಕೊ ಕೋ
ತೋಳನ ಕಣ್ಣಿಗೆ ಕೋಲಿಕ್ಕೋ!
ಬಾಯಿಗೆ ತುಂಬ ಮಣ್ಣಿಕ್ಕೋ!

**ತೋಳ:**— ಜಂಬದ ಪೋಲಿ ಕೋಳಿ,
ಗೂಡಿಗೆ ಮಾಡುವೆ ದಾಳಿ!

**ಕೋಳಿ:**— ಬನ್ನಿ—ಬನ್ನಿ—ಬನ್ನಿ,
ಸಹಾಯ ನೆಚ್ಚಿ ತನ್ನಿ,
[ತಾನು ಕಾಳಗಕ್ಕೆ ಅಣಿಯಾಗಿ]
ತೋಳಕೆ ಕೊಡೆನಾ ಹಾದಿ,
ಶರೀರ ನೆತ್ತರ ಬೀದಿ!

**ನರಿ-ನಾಯಿ:**—ಕೋಳಿ ತಳ್ಳಿಬಿಡು—
ಹಿಡಿದ ಮರಿಯನು ಕೊಡು.

**ತೋಳ:**— ನರಿ-ನಾಯ್ಗಳ ಕೇಳಿ
ಬಿಟ್ಟೆನೇನು—ಧಾಳಿ?
[ಈ ತನಕ ಮಲಗಿದ್ದು ಎಚ್ಚರವಾಗಿ ಕುಳಿತು.]

**ಕರಡಿ:**— ಇದೇ ಸಮಯ . . . . ಇದೇ ಸಮಯ;
ಬೇಡ ಈಗ . . . ನಯ ಭಯ.
ಮುಂದಿನ ಭಾಗ ನಿಂಗೆ;
ಹಿಂದಿನ ಅಂಶ ನಂಗೆ.
ಕಾದಾಟ ಬೇಡ ನಮಗೆ;
ಸ್ನೇಹವೇ ಇರಲಿ—ಬಿಮ್ಮಗೆ.
[ಎಂದು ಕೋಳಿಯನ್ನು ಹಂಚಿ ಕೊಳ್ಳುವುವು.]

**ತೋಳ:**— ತೋಳ ಕರಡಿಗೆ ಪ್ಯಾಕ್ಟು;
ನೆಯಿಬರ್ಲಿ ಗುಡ್ ಆಕ್ಟು.

**ನಾಯಿ:**— ರಷ್ಯನ್ ಕರಡಿ ಮೋಸ!
ಕೊಟ್ಟಿತಲ್ಲಾ—ಕೆಲಸ.

**ನರಿ:**— ಯೋಚನೆ ಬಿಟ್ಟು ಕಾದಿ,
ಸತ್ಯಕೆ ಸಾರುವ ಹಾದಿ.
[ಯುದ್ಧಕ್ಕೆ ತಯಾರಿ ನಡೆಯಿಸಲು ಕುರಿಯನ್ನು ಎಳೆದು]
ಬೇ ಬೇ ಬೇ—ಕುರಿಯೇ,
ಹಿಂದೀ ಮುಂದೆಯ ಮರಿಯೇ!
ಬಾರೈ ಕಾದಲು ಬಳಿಗೆ
[ಎಂದು ಎಳೆದು ತಂದು]
ಅಬಲರ ಕಾಯ್ದು ಕೀರ್ತಿ!
ನಿನಗೂ ಬರಲಿ ಭರ್ತಿ!
ನನ್ನಯ ಮನವೇ,
ನಿನ್ನಯ ತನುವು.
ಬಂದೇ ಬಿಟ್ಟೆಯಲ್ಲ!
ಭೇಷ್ ಆಯಿತಲ್ಲ!

**ನಾಯಿ**:— ನಾಯ್ಗಳ ಹಿಂಡನು ಕೂಡಿಯೆ ಹೊರಟೆ.
ತೋಳನ ಕೈಗೆ ಪರಟೆ!

**ತೋಳ**:— ಕಿರುಬಣ್ಣ, ನೀನೂ ಯುದ್ಧವ ಸಾರು.

**ಕಿರುಬ**:— ಗಳಿಗೆಯು ಬರಲಿ—ನಾನೂ ಜೋರು.
ಕೂಗು, ಕಿರುಚು, ಹಾರು, ಚೀರು;
ಕಂಡದ್ದೆಲ್ಲಾ ಪರಚು;

[ಕಾಳಗ ಪರೀಕ್ಷಿಸಿ.]

ಬಿತ್ತು—ವೊಲ, ನಿನಗೆ ಗೆಲ,
ನಾಯಿ ಮಡಚಿದೆ ಬಾಲ!
ನಾನೂ ಸೇರುವೆ ಯುದ್ಧದ ಹೊಲ,
ಗೆಲದಲಿ ನನಗೂ ಪಾಲ?

**ತೋಳ-ಕಿರುಬ**:—ಲೆಫ್ಟ್ ರೈಟು—ಲೆಫ್ಟ್ ರೈಟು!
ತೋಳ ಕಿರುಬನ ವ್ಮೈಟು, (might)
ಇಂದಿನಿಂದ ಅದೇ ರೈಟು,
ಪ್ರಜಾಸತ್ತೆಗೆ ಗುಡ್‌ನೈಟು.

ಹಿಡಿ ಕುರಿ ಮರಿ,
ಕಡಿ ನರಿ ಮರಿ.
ಹೊಡಿ, ಬಡಿ, ಇರಿ,
ಭೀತಿಯು ಹಾಕಲಿ ಮರಿ!

**ನರಿ**:— (ಒಂದು ಮೂಲೆಯಲ್ಲಿ ಒಂಟಿಯಾಗಿ ಊಳಿಡುತ್ತ)
ಉಕ್ಯೋ ಉಯ್ಯೋ, ಉಕ್ಯೊ ಉಯ್ಯೊ ಲೋಕ
ಕೇಳುತಲಿಹುದೇ ಶೋಕ?
ಸತ್ಯದ ಪಕ್ಷಕೆ ಬೆಂಬಲ ನೀಡಿ—
ತೋಳನ ನೀತಿಗೆ ಅನ್ನಿರಿ 'ಷೋಡಿ'—

**ತೋಳ**:— ಅಳುತ್ತೈತೆ—ನರಿ!
ಅದಕೆ ಹೊಟ್ಟೆ ಉರಿ.
ಕೇಳಿರೆಲ್ಲ ಮೃಗ,

ದೂರಬೇಡಿ ಜಗ,
ಆಕ್ಸಿಸ್ ಪಕ್ಷ ರೈಟು —
ವಿಜಯ ನಿಜ ಸೈಟು (sight)
ಬೆಂಬಲ ಕೊಡಿ ಅಂದೆ—
ಹಂಬಲ ಬಿಡೆ—ಮುಂದೆ.
ಮೌನದಿ ಕುಳಿತಿಹೆ ಕಳ್ಳರ ಮರೆಯೆ,
ವಿಜಯದ ಬಳಿಕ ಅವರೊಳು—ಉರಿಯೆ!
ಸ್ನೇಹದಿ ಕಾದಲು ಸೇರಿದರಾಗ
ದೊರೆವುದು ಭಾವಿ ಲೋಕದ ಭೋಗ!



ಅಂಕ ೨.

[ಒಂಟಿಯಾಗಿ ಕುಳಿತು ಸಹಾಯಕ್ಕಾಗಿ ಇನ್ನೂ ಊಳಿಡುತ್ತಿದೆ.]

**ನರಿ:—** ಉಕ್ಯೋ ಉಯ್ಯೋ ಉಕ್ಯೋ ಉಯ್ಯೋ—ಲೋಕ,
ಬಡ ಜನಕಾಗಿದೆ—ಶೋಕ.
ಸತ್ಯದ ಪಕ್ಷಕೆ ಬೆಂಬಲ ನೀಡಿ,
ತೋಳಗು ಕಿರುಬಗು ತೊಡಿಸಿರಿ ಬೇಡಿ.

**ದನ:—** ನಿನ್ನೀ ಕೂಗು ಇಂದಿನದು!
ನನ್ನದು ಮಾತ್ರ—ಎಂದಿನದು;
ಚೀನಿ ದೊಡ್ಡಿಗ ಜಪಾನಿ ಚಿರತೆ,
ಹಿಂಸೆಯ ಕೊಡುತಿದೆ; ನಿತ್ಯವು ಚಿಂತೆ.

[ಸಿಂಹವನ್ನು ಕಂಡು ಮೊರೆಯಿಡುವುದು]

**ನರಿ:—** ಅಯ್ಯೋ ಸಿಂಹ, ಬಾರದೆ ದಯ?

[ದೂರದ ಸಿಂಹವು ಬರುವುದು]

**ಸಿಂಹ:—** ನನ್ನದೆ ನನಗೆ, ಅದುವೇ ಸೊಯ,
ಆದರು ಲಿಪ್ಪಿನ ಸಿಂಪೆತಿಯೆಲ್ಲಾ (Lip sympathy)

ನಿಮಗೇ ಮಿಾಸಲು; ಇನ್ನಾರಿಗಿಲ್ಲ.
ಕಳಚಿದ ಉಗುರಿನ (old cruisers) ವಿಕ್ರಯ ಮಾಡಿ
ಕೊಡುವೆನು ಸಹಾಯ, ಹಗೆಗಳ ದೂಡಿ!

**ಕಿರುಬ:—** ಸೊಕ್ಕಿದ ಸಿಮ್ಮ್ಹನ ಕೇಳಿತು ನರಿ;
ರೊಕ್ಕದ ಆಸೆಯ ತೋರಿಸಿತು....

**ತೋಳ:—** ಸಿಮ್ಮ್ಹನ ಭೀತಿಯು ಅಷ್ಟೇನಿಲ್ಲ;
ಕರಡಿಯು ನಿದ್ರೆಯು ನಂಬುಗೆಯಲ್ಲ.
ಜಪಾನಿ ಚಿರತೆಯ ಕೆರಳಿಸಿ ಬೇಗ,
ಸ್ವಾಯತ್ತವಾಗಿಪ ಲೋಗದ ಭೋಗ

[ಆದನ್ನು ಕರೆಯಿಸುವುದು]

**ತೋಳ, ಕಿರುಬ, ಚಿರತೆಗಳು ಸೇರಿ:—**
ಕೇಳಿ ಕೇಳಿ ಜಗ,
ಹೊಂದಬೇಡಿ ದಗ—
ಚಿರತೆ, ಕಿರುಬ, ತೋಳ,
ಇವಕ್ಕೆ ನಂಟು ಬಹಳ,
ಮೂವರ ಮಾತನು ಕೇಳಿ
ಶರಣು ಬನ್ನಿ—ಬಾಳಿ.

[ಮೂವರೂ ಸೇರಿ ಕುಣಿಯುವುವು]

**ಚಿರತೆ:—** ಹೊರಟೆ ನಾನು, ಹೊಸತೇ ಯಾತ್ರೆ.
ತಬ್ಬಲಿ ನಾಯಿ ನರಿಗಳ ಮರಿಯ,
ಸವಿಯಲು ಹೊರಟೆ, ನೋಡಾ ಪರಿಯ!

[ಎಂದು ಕಾದಾಟಕ್ಕೆ ಮುಂದುವರಿಯುವುದನ್ನು ಕಂಡು]

**ಸಿಂಹ:—** ಏನಿದೇನು ಚಿರತೆರಾಯ,
ಊರ್ಮನೆ ಬಿಟ್ಟು ಹೊರಟಿಹೆಯ!

**ಚಿರತೆ:—** ಛಿ! ಛಿ! ಛಿ! ಛಿ! ಬಂದೆ ನಿನ್ನಲ್ಲೇ—
ಮನ್ನಣೆ ಸಲಿಸಲು—ಅಹುದಲ್ಲೇ!

[ಹೀಗೆಂದು ಸಿಂಹದ ಬಳಿಗೆ ಹೋಗಿ ಮಲಗಿದ, ಸಿಂಹನ ಬಾಲದ **ಗೊಂಡೆ**ಯನ್ನು ಕಚ್ಚುವುದು.]

ಸಿಂಹ:— ಏನೇ ಖೋಡಿ, ಸಂಧಾನ ಮೋಡಿ,
ಕಚ್ಚಿ ತಿಂದೆಯ ಬಾಲದ ಗೊಂಡಿ? (Pearl Harbour attack)

[ಅದನ್ನು ಕಂಡ ಪಸುವು]

**ದನ.—** ಅಂಬಾ, ಅಂಬಾ, ಅಂಬಾ . . . .
ತಿಳಿಯಿತೇನು . . . . ಸಿಂಬಾ?
ನಮ್ಮನೆ ನುಗ್ಗಿದ ಹಾಳು ಚಿರತೆ,
ನಂಬಿದೆ; ಬಂತು, ನಿನಗೂ ಚಿಂತೆ!

**ತೋಳ-ಕಿರುಬ:—** ಲೆಪ್ಟ್ ರೈಟು ಲೆಪ್ಟ್ ರೈಟು,
ಚಿರತೆ ಸಲಿಸಿದೆ ಟೈಟು!
ಲೆಪ್ಟ್ ರೈಟು ಲೆಪ್ಟ್ ರೈಟು
ವಿಕ್ಟರಿ ಈಸ್ ಇನ್ ಸೈಟು!
ಕರಡಿಯ ಒದೆಯುತೆ ಕುಣಿಯುವ ಗೈಟು (gait)
ಇದೇ ಕೀರ್ತಿಯ ಹೈ ಲೈಟು!

[ಹೀಗೆಂದು ಮಲಗಿದ ಕರಡಿಯನ್ನು ತುಳಿಯುವುವು]

**ನರಿ:—** ಉಕ್ಯೊ ಉಯ್ಯೊ ಉಕ್ಯೊ ಉಯ್ಯೋ
ಉಕ್ಯೊ ಉಯ್ಯೊ—ಲೋಕ!
ತಿಳಿಯದೆ ಈಗ—ತಿಳಿಯದೆ ಬೇಗ
ಶಾಂತಿಗೆ ತಟ್ಟಿಹ ಡೋಕ?

ಸಿಂಹ:— ಬಂದೆ ನರಿಯೆ—ಸಹಾಯ ತಂದೆ
ಬಂದೆ ಪಸುವೆ—ಪಂಗಡ ಒಂದೆ.
ಕಾದುವ ಸೇರಿ ಯುನೈಟೆಡ್ ನೇಶನ್ಸ್.
ಬೇಕು, ಭಾರಿ ಪೇಶನ್ಸ್.

**ನರಿ:—** ಕಾಲಕ್ಕೆ ತಕ್ಕ ಕೋಲ ಎಂದು
ಹಿರಿಯರು ಮಾಡಿದ ಗಾದೆ.
ಕರಡಿಯ ಕಾಲಿಗೆ ವಂದಿಸಿ ನಿಂದು,
ನಿವಾರಿಪೆ, ಬಂದಿಹ ಬಾಧೆ!

[ಎಂದು ಕರಡಿಯು ಬಳಿ ಹೋಗುವುದು]
ಕುಶಲವೆ ಕರಡಿ—ತುಳಿಯಿತೆ ತೋಳ?
ಲಾಂಛನ ನೀಗಿಸಿ ಮೆರೆಸುವ ಬಾಳ.
ಬಿದ್ದ ಜಗವೇ ಕೇಳಿ,
ಕೇಳಿ ಧೈರ್ಯ ತಾಳಿ.
ಐದೂ ಬೆರಳಿಹ ಕೈ
ನೋಡಿ—ಅನ್ನಿರಿ ಜೈ.
ನರಿ, ನಾಯಿ, ಸಿಂಬ
ಕರಡಿ, ದನ ಎಂಬ
ಐವರು ಗಂಡರ (Big Five) ಮುಂದೆ
ಆಕ್ಸಿಸ್ ಪಕ್ಷ—ಹಿಂದೆ.
[ನೆರೆಕರೆಯ ದುರ್ಬಲ ಪಶುಗಳು ಅಂಜುವುವು.]

**ಟರ್ಕಿಕೋಳಿ**—ಬಲಿಷ್ಟರವರ ಮುಂದಕೆ ತಂಟೆ
ನಡೆಸುತೆ, ಬದುಕಿ ಬಾಳಿದರುಂಟೆ?

**ತೋಳ:**— ಯಾರ್‍ಯಾರಿಲ್ಲವೊ ನಮ್ಮಯ ಪಕ್ಷ,
ಅವರೇ ಹಗೆಗಳು ಎಂಬುದು ಲಕ್ಷ.

**ಸಿಂಹ:**— ನೋಡೋ, ಕೇಳೋ, ನರಿರಾಯ,
ಜಗಕ್ಕೆ ಹೋಗದು ತೋಳನ ಭಯ.
ಅದರಿಂ ಕೆರಳದು ಬಡವರ ಧೈರ್ಯ,
ಕೆರಳದೆ ಆಗದು ನಮ್ಮೀ ಕಾರ್ಯ.

**ನರಿ:**— ನಿಜ, ನಿಜ—ಸಿಂಬ; ಜಗತ್ತು ಹುಂಬ!
ಬಾಯಿಯ ಜಂಬ, ವಿಜಯಕೆ ಕಂಬ.
ದೋಣಿಯನೇರಿ—ನಾನೂ ನೀನೂ,
ಬೀರುವ ಒಂದು ಶುಭಾಶಯವನ್ನು,

**ನರಿ, ಸಿಂಹ:**— ಸಲಿಸುತಲಿರುವೆವು ನವೀನ ಚಾರ್ಟರ್
ಕೆಳಗಿದೆ ಸಾಕ್ಷಿಗೆ ಅಟ್ಲಾಂಟಿಕ್ ವಾಟರ್
ಕೇಳಿದೆ ನಮಗೆ— ಅಬಲರ ಕರೆ,
ಅದಕೀ ಸಂಗರ; ಅದುವೇ ಖರೆ.

ಲೋಕದ ಭಯ, ಹಸಿವನು ನೀಗಿಸಿ,
ಸತ್ಯವನುಳಿಸಲು-ಜಯವನು ಬರಿಸಿ.

[ಈ ಕೂಗಿಂದ ಉತ್ಸಾಹಗೊಂಡ ಕೆಲವು ಜೀವಿಗಳು.]

**ಕುರಿ:—** ದೇವರೇ—ನಿಮಗೆ ಬುದ್ಧಿ
ಕೊಟ್ಟನು; ಒಳ್ಳೆಯ ಸುದ್ದಿ,
ನನಗೂ ಲಾಗುವೆ—ನಿಮ್ಮೀ ಚಾರ್ಟರ್?
ಅದುವೇ ಧೈರ್ಯ, ಶೆಲ್ಟು, ಮಾರ್ಟರ್.

**ನರಿ:—** ಮಂಕೇ ಮರಿ, ಕುರಿ ಮರಿ,
ಪಾಲಕ ನಾನು, ಯಾಕೆ ಚಾರ್ಟರ್?
ಬಿಳಿ ಜಗಕಷ್ಟೆ ಅದುವೇ ಲಾಗು
ನನಗೂ ನಿನಗೂ ಸ್ನೇಹ........ಹೋಗು.

**ನರಿ, ಸಿಂಹ, ದನ, ಕುರಿ, ನಾಯಿ** | ವೀ ಫಾರ್ ವಿಕ್ಟರೀ
ಅದುವೆ, ನಮ್ಮ ನಿಜಗುರಿ!

(ತಿರುತಿರುಗಿ ಪಲ್ಲವಿಯಾಗಿ ಹೇಳುತ್ತ ನಡೆಯುವುವು.)

ಲೆಫ್ಟ್ ರೈಟು ಲೆಫ್ಟ್ ರೈಟು, [ತೆರೆಯ ಹಿಂದಿಂದ]
ಆಕ್ಸಿಸ್ ಡೈನಮೈಟು,
ಶರಣು ಬನ್ನಿ, ಶರಣು ಬನ್ನಿ,
ಬದುಕಿರಿ—ಬೇಡವು ಸ್ಪೈಟು (spite)

**ಐವರು:—** ವಿ—ಫಾರ್ ವಿಕ್ಟರಿ,
ಅದುವೆ ನಮ್ಮ ನಿಜಗುರಿ! (ಕವಾಯತು ನಡೆಸುವರು.)

**ಕುರಿ:—** (ಅಳುತ್ತ ಬೆಂಗಡೆಯಲ್ಲಿ)
ವಿ—ಫಾರು (far) ವಿಕ್ಟರೀ
ಅದುವೆ ನಮ್ಮ ನಿಜಗುರಿ.
ತೋಳಕ್ಕಿಂತ ನರಿ ವಾಸಿ;
ಅಷ್ಟೇ ತೀರ್ಪಿನ ಸಮ್ಮರಿ (summary)

———

## ಅಂಕ ೩.

[ಇನ್ನೂ ಕವಾಯತು ಮಗ್ನರಾದ ಐವರು ಗಂಡರು.]

**ನಾಯಿ:—** ಗೌ ಗೌ ಗೌ—ಮರಿಗಳೆ ಬನ್ನಿ,
ಸ್ವಾತಂತ್ರ್ಯ ಸಮರಕೆ ಧೈರ್ಯವ ತನ್ನಿ.
ಸತ್ಯದ ಪಂಗಡ ಬೆಳೆಯುತ್ತಿಹುದು!
ಆಸೆಯು ಬಾಂದಳ ಬಿತ್ತರಿಸಿಹುದು.

**ನರಿ:—** ಗೆಳೆಯರೆ ಬನ್ನಿರಿ, ಹಲ್ಗಳ ಮಸೆಯಿರಿ.
ಆಕ್ಸಿಸ್ ಮೇಲಕೆ ತಕ್ಸೀರ ಬೆಳೆಸಿರಿ.
ಅಂಕಲ್ ಸಿಂಬ (Uncle Sam)ಗೆ ತ್ರಾಣವು ತುಂಬ,
ಅಲಾಯಿ (allies) ಪಕ್ಷಕೆ ಧೈರ್ಯದ ಕಂಬ!

**ದನ:—** ಅಂಬಾ — ಅಂಬಾ — ಅಂಬಾ.
ಸಹಾಯ ತಾರೋ ಸಿಂಬ,
ಚಿರತೆಯನಿದಿರಿಸಿ ಮುರಿದಿವೆ ಕೊಂಬು
ಕೊಟ್ಟರೆ ಉಂಟು, ನೀನು ಬಾಂಬು.

[ಅಸಂತೃಪ್ತಿಯಿಂದ ಬೇಯುತ್ತಿರುವ ಕರಡಿಯು]

**ಕರಡಿ:—** ತೋಳನ ಎದುರಿಗೆ ಬಿದ್ದಿಹೆ ನಾನೇ
ಹೆಚ್ಚಿನ ಏಟಿಗೆ ಬಲಿಯಾಗಿಹೆನೇ.
ಸಹಾಯ ಬೇಕು—ತುಂಬ, ಶಾನೆ,
ತೋಳದ ಬೆನ್ನಿಗೆ ಎರಗಲಿ ಸೇನೆ—

**ಎಲ್ಲರೂ:—** ವೀ ಫಾರ್ ವಿಕ್ಟರಿ;
ಅದೇ ನಮ್ಮ ನಿಜಗುರಿ.

**ನರಿ:—** ಎಲ್ಲಕು ಬೇಕು ಕ್ರಮ—ಸರಿ.
ಯೋಚನೆ ಬಿಡಿ ತರಾತುರಿ,
ಚಾಂಕಿ ಹೆಸು(Chiang-ki-Shek)ಕೇಳ್ ಸರಿ,
ತೋಳ, ಕಿರುಬ ಮೊದಲ್ಗುರಿ—
ಮತ್ತೇನಾಗ? ಚಿರತೆ ಮರಿ
ಬಿತ್ತೆಂದು ತಿಳಿ, ಖರೋಖರಿ.

**ಕರಡಿ:**— ಕೆಂಚು ಕರಡಿಯು ಅಂಗಳ ನುಗ್ಗಿ
ತೋಳವು ಹಾರುತಿರೆ,
ನೀವೇನಲ್ಲಿ ದೂರದಿ ಬಗ್ಗಿ
ಸಹಾಯವಿಲ್ಲ--ಮಾತು ಬರೆ!

[ಸಿಟ್ಟಾಗುವುದು.]

**ನರಿ:**— ಅಯ್ಯೋ ಕರಡಿ, ಯೋಚನೆ ಬೇಡ,
ತಯಾರಿ ನಡೆದಿದೆ ತುಂಬ.
ಮೊದಲಿಗೆ ತರಿಯುತೆ ಕಿರುಬನ ಓಡ
ಕೊಡುತ್ತ ಬರುವೆವು—ಇಂಬ.

**ಎಲ್ಲರೂ:**—ವೀ—ಫಾರ್—ವಿಕ್ಟರಿ,
ಅದುವೆ ನಮ್ಮ ನಿಜಗುರಿ.

[ಬಾಯಿ ಗಪ್ಪಲ ಮಾತ್ರ]

**ತೋಳ:**— ಕರಡಿಯನ್ನು ಸಾಯಿಸಿಬಿಟ್ಟು
ಕುಳಿತು ನಗುವ ಹೊಸ ಪರಿ!

**ನರಿ:**— ಛೇದಗೊಳ್ಳಲಾರೆವಯ್ಯ,
ತೋಳ, ತಂತ್ರ ಸಾಗದು!
ಕಿರುಬನನ್ನು ಕುಟ್ಟಿ ಕೊಲ್ಲಿ,
ಬಿದ್ದೆವನ್ಯವಾಗದು—
ವಿ—ಫಾರ್—ವಿಕ್ಟರಿ— [ಎಂದು ಕಿರುಬನನ್ನು ಸುತ್ತುವರಿದು ಕಾಳಗವಾಡುವುವು.]

**ಕಿರುಬ:**— ಅಯ್ಯೋ ಸಾಕು, ಅಯ್ಯೋ ಸಾಕು,
ಕೊಲ್ಲಬೇಡಿ ಪಶುಗಳೇ,
ನೋಟಕೇನೊ ತೋಳನಾದೆ,
ಹೃದಯ ಥೇಟು ನರಿಯೊಳೆ!

**ಎಲ್ಲರು:**— ವಿ—ಫಾರ್ ವಿಕ್ಟರಿ. [ಕಿರುಬ ಉರುಳುವುದು]

**ಕಿರುಬ:**— ಬಿದ್ದೆ ಬಿದ್ದೆ—ಶರಣ್ರ್ರೀ
ಗೆದ್ದವರ ಕಡೆ ನಾನ್ರೀ,

ತೋಳಕ್ಕೆದುರು ಕಾದಿರಿ,
ನಾನೂ ಬರುವೆ ನಿಂದಿರಿ.

[ಎಂದು ಅವುಗಳ ಹಿಂದೆ ನಿಲ್ಲುವುದು.]

**ನಾಯಿ:—** ಗೌ-ಗೌ-ಗೌ-ಗೆಲ್ದೆವು ನಾವು.
ಕಿರುಬನ ಸೋಲಲಿ ಮರೆತೆವು ನೋವು.
ಪುನಶ್ಚ ದೊರೆತರೆ ಮನೆಯೂ, ತಾವು
ಆ ದಿನ ಸಮರಕೆ ಕೂನೆ ನಿಶ್ಚಯವು.

**ನರಿ:—** ಕಂಡೆಯೋ ಏನು ಕರಡಿರಾಯ,
ಕಿರುಬನ ಮನೆಯು ಬಂಡಾಯ!
ದಣಿವನು ಆರಿಸಿ, ಒಂದೇ ಗಳಿಗೆ,
ತೋಳಗೆ ಅರೆವೆವು ಮದ್ದಿನ ಗುಳಿಗೆ.

**ಕರಡಿ:—** ಕಾಣುವುದೇನು, ನರಿರಾಯ?
ತೋಳನ ಜಗಳದಿ ವೈರಿಯೇ ಗಾಯ,
ವೈರಿಯ ಜೆಂಗಡೆ ಕಚ್ಚದೆ ಹೋಗಿ—
ಮರೆಯೆನು ಎಂದಿಗು, ಸಿಟ್ಟಿನ ಯೋಗಿ!

**ತೋಳ:—** [ಒಂಟಿಯಾಗಿ ಕಾದು ದಣಿದು ತುಸು ಆಯಾಸದಿಂದ ಕೂಗುವುದು]

ಲೆಫ್ಟು ರೈಟು, ಲೆಫ್ಟು ರೈಟು
ಸಹಾಯರಾರು ಇನ್ನುಂಟು?
ಕಿರುಬನ ಮೋಳ ತಪ್ಪಿತು ಬ್ಲೈಟು (blight),
ಆದರೂ ಕಾದುವೆ—ಛಾನ್ಸ್ ಬ್ರೈಟು,
ಲೋ ಲೋ ಲೋ ಲೋ ಚಿರತೆ—
ಕರೆಯುವದಾದರೂ ಕೇಳೀತೆ?

**ಚಿರತೆ:—** ಕೇಳದೆ ಎಂದೂ ಇದ್ದೀತೇ.
ವಿರಾಮವೆನಗೆ ಇದ್ದೀತೇ?
ವೈರಿಯು ಮರಿಗಳ ಹಿಡಿಯುತ್ತಿ
ಕಾಲವ ಕಳೆಯುವೆ, ನೋಡ್ ಇತ್ತ!

**ತೋಳ:**— ಆಕ್ಸಿಸ್ ಪಕ್ಷದ ಕಿರುಬ, ಕತ್ತೆ,
ಆಟಕೆ ಕೊಟ್ಟಿತು-ಚಕ್ಕರ್, ಲತ್ತೆ.
ಕರಡಿಯು ಜತೆಯುಲಿ ಜಗಳ ಕಿತ್ತೆ,
ಮನದಲಿ ತಪ್ಪೆಂದ್ ಕಾಣ್ಸುತ್ತೆ—
ಮೂಡಣ ಚಿರತೆ ನೀನೂ ಬಾರೆ,
ರೈಸಿಂಗ್ ಸನ್ನು (Sun), ಮೂನು, ತಾರೆ,
ಕರಡಿಯು ಸೊಂಟಕೆ ಬಾಯಿಯ ಹಾಕು,
ಗೆಲುವಿಗೆ ನಮಗೆ ಹೆಚ್ಚೇನು ಬೇಕು!

**ಚಿರತೆ:**— ಛೀ, ಛೀ, ಛಿಛಿ ಹಾಗುಂಟೆ?
ನನ್ನಯ ಭದ್ರ ನನಗುಂಟೇ?
ಕರಡಿಗು ನನಗು ಬಲು ನಂಟೆ.
ಬೇಡ—ಎದುರಿಗೆ ಆ ತಂಟೆ,

(ನಿರಾಶೆಗೊಂಡ ತೋಳ)

**ತೋಳ:**— ಆದರೇನು ಹೋದರೇನು, ಖಾಜಿ ನ್ಯಾಯ ಹೆಚ್ಚು,
ಆದರೇನು ಹೋದರೇನು—ನಾಜಿ ವೈರ ಹೆಚ್ಚು!
ಕಾಳಗಕ್ಕೆ ಇಳಿದ ಮೇಲೆ—ತೋರ್ಬ್ವೆ ವೈರ, ಕೆಚ್ಚು—
ತೋರಲಾರೆ ಮೋರೆಯಲ್ಲಿ, ಭಯ, ಭೀತಿ ಪೆಚ್ಚು.

**ಎಲ್ಲಾಸ್:**—ಡಿ-ಡೇ ಬಂತು, ಡಿಮಿ ಡಿಮೀ!
ಮಾತಿನ ಮುಗಿತ, ಢಮಾಢಮಿ,
ಸೋತಿದೆ ತೋಳ, ಘುಮಾಘ್ರುಮಿ,
ಲೋಕದ ಒಡೆತನ ಬರಿ ಭ್ರಮಿ!

**ಎಲ್ಲರೂ:**—ವೀ — ಫಾರ್ — ವಿಕ್ಟರೀ
ದೊರೆವ ತನಕ ಕಾದಿರಿ!!

[ತುಂಬ ಹೋರಾಟವಾಗಿ — ತೋಳವು ದಣಿದು ನೆಲವನ್ನು ಹಿಡಿಯುವುದು]

**ಕರಡಿ:**— ಬಳಿಗೆ ಬಾರೋ, ನರಿರಾಯ,
ಕುಸಿದಂತಿಹುದು ತೋಳನ ಭಯ.
ತೆಗೆಯಲು ಬೇಕು ನಾಳಿನ ಪಾಯ—

ಬರಲೇ ಕೂಡದು ಮುಂದೆ ಅಪಾಯ.

**ನರಿ**:— ಸತ್ಯದ ಮಾತು, ಸಿಂಬನ ಕರೆವೆ,

**ಕರಡಿ**:— ಕರೆಯಲು ಇಲ್ಲವು ಅಡ್ಡಿ, ಪರವೆ.

**ಸಿಂಹ**:— ಬಂದೆನು ಕರಡಿ ಕೆಂಚನ ಕರೆಗೆ
ಹೇಳಲು ಏನಿದೆ—ಮುಂದಿನ ಒಸಗೆ?

**ನರಿ**:— ಬೇಡವೆ ಸಿಂಬಾ ನಮ್ಮಲಿ ಬೆಸುಗೆ?

**ಕರಡಿ**:— ಬರಲೇ ಕೂಡದು ಚಿರಿ ಚಿರಿ, ಕಡೆಗೆ.
ಕಾದಿದರಾರು ಈ ಸಮರದಲಿ?

**ನರಿ**:— ನೀನು, ನಾನು, ಸಿಂಬನಲಾ

**ಕರಡಿ**:— ಮೂವರೇ ಮುಖ್ಯ, ಮರೆತಿರಲಾ.

**ನರಿ, ಸಿಂಹ**:—ಮೂವರೇ ಮುಖ್ಯ-ಮರೆಯುವಲ.

**ಕರಡಿ**:— ಹಾಡುವ ಜತೆಗೆ—ಹೊಸಗಾನ
ಇತರರು ಕೇಳಲು; ಇರೆ ಮೌನ.
ಬಿಗ್ ತ್ರೀ ಬಿಗ್ ತ್ರೀ—ಎಂಬ ಮಾತು ಬರೋಬ್ಬರಿ
ಬಿಗ್ಗ್ ತ್ರೀ ಹಿಂದೆ ಬನ್ನಿ—ಬಿಟ್ಟು ಇತರ ಉಸಾಬರೀ
(ಹಾಡುತ್ತ ಮುಂದುವರಿಯುವರು)

**ನರಿ**:— ಬರದ ಜನಕೆ ಇಲ್ಲ ಮಾನ, ಆದನು ಮಾತ್ರ ನಂಬಿರಿ.

(ಹೋಗುವರು)

**ನಾಯಿ**:— [ಒಂಟಿಯಾಗಿ ಯೋಚಿಸುತ್ತ] ಶಾಂತಿಯ ಸಂತೆ
ಕೂಡುವುದಂತೆ,
ಕರೆಯುವರೆಮ್ಮನು ಅಂತೆ!

**ಕೋಳಿ**:— ನನ್ನಯ ಮರಿಗಳ ಕರಡಿಗೆ ಕೊಟ್ಟು,
ತೋಳನ ಮರಿ ನನಗಂತೆ!

**ನಾಯಿ**:— ಅದೇನು ಹೆಚ್ಚು, ನನ್ನನು ಮರೆತೇ
ಹೋಗುವರದಕೆ—ಅಂತೆ;
ಜಗಕ್ಕೆ ಹಿರಿಯರು ಐವರು ಎಂದು,
ಕೂಗಿದ ಸುದ್ದಿಯೆ ಕಂತೆ!

ಸಂತೆಯ ಶಾಸ್ತ್ರ ವಿಸ್ತಾರ ಹೇಳಿ
ಕಾಯ್ವರು ಬೀಗ್ ತ್ರೀ ಅಂತೆ!

**ಕುರಿ:—** ಕರೆಯದು ಬಂದಿದೆ ನನಗೂ, ಕೇಳು
ನಾನೂ ಹೋಗುವೆ ಹರ್ಷ ತಾಳು,
ಕೊರಳಿನ ಸರಪಣಿ ತಪ್ಪಿದರಾಯ್ತು,
ಕಾಯ್ದಿಹ ವಿಜಯವೆ ಬಂತು!

**ದನ:—** ಚಿರತೆಯು ಕಾಟ ತಪ್ಪಲು ಮುಂದಕೆ,
ಬಾಳುವೆ ನಡೆಸುವ ಬಯಕೆ;
ಅದುವೆ ನನಗೆ ವಿಕ್ಟರಿ ಮುಂದಕೆ;
ಸಂಶಯ ಹರಿಸೆ- ಚಂದಕೆ.

**ಅಶರೀರವಾಣಿ:—** ಅಶರೀರವಾಣಿಯು ಆಗುತಲಿಹುದು
ಅದುವೇ ಲಾಲಿಸಿ ಕೇಳಿ—.
ಶಾಂತಿ ಪ್ರಸವದ ವೇದನೆ ಇಹುದು
ಅದರಿಂ ನಿರೀಕ್ಷೆ ತಾಳಿ.

**ನರಿ, ಸಿಂಹ, ಕರಡಿಗಳು** | ಬಿಗ್ ತ್ರೀ—ಬಿಗ್ ತ್ರೀ—ನಮ್ಮ ಮಾತು ಕೇಳಿರಿ
ಬಿಗ್ ತ್ರೀ—ಬಿಗ್ ತ್ರೀ—ಮುಂದೆ ಚಂದ ಬಾಳಿರಿ.

**ಸಿಂಹ:—** ವಿಧಿಸುವೆವಯ್ಯ ಶಾಂತಿಯ ನಾವು
ಜಗಳಕೆ ಕೊನೆ ತರಲು;
ಮೀರುವ ಜನಗಳ— ದಂಡಿಸಲಿಹೆವು
ಬಳಗಕೆ ಸುಖ ತರಲು.

(ಕುರಿಯ ಅಸಮಾಧಾನಕ್ಕೆ ಉತ್ತರವಾಗಿ)

**ನರಿ:—** ಕುರಿಗಳ ಮನೆಯು ಒಳತೋಟಿಯನು
ತಿಳಿಸಲು ಸ್ಥಳವಲ್ಲಾ
ಒಡೆಯನ ಹಿಂದಕೆ ನಡೆದರೆ ಒಯಿನು
ಅರಿಯಲು ತಡವಿಲ್ಲ!

**ಕರಡಿ:—** ಚಿರತೆಯು ಸಾವದು ಹಸುವಿಗೆ ಕ್ಷೇಮವು;
ಅದೊಂದು ಕೊನೆಯಲ್ಲ,

ಬಲಿಷ್ಠ ಮೂವರ ಒಲವಲಿ ನಲಿವುದು!
ಚೆಲುವಿಗೆ ಹಿತವಲ್ಲ.

(ಮೂವರು [ನರಿ, ಸಿಂಹ, ಕರಡಿ] ಹಾಡಿ ನಲಿಯುವಾಗ—ಉಳಿದ ಪ್ರಾಣಿಗಳು ಬೆಪ್ಪಾಗಿ ಇಣಿಕಿ ನೋಡುವುವು)



## ಅಂಕ. ೪

[ನಾಡಿನ ಕಗ್ಗವಿಯೊಂದರಲ್ಲಿ ಆಲೋಚನಪರರಾಗಿ ಕುಳಿತ ನರಿ, ಸಿಂಬ, ಕರಡಿಗಳು]

**ನರಿ:** ಎಂತಹ ಸಂತಸ ಇಂದಿನ ದಿನದಿ,
ತೋಳನ ಭೀತಿಯು ಕಳೆದುದು ಭರದಿ;
ಉಳಿದಿಹ ಚಿರತೆಗೆ ಬಂದರೆ ಕೊನೆಯು
ಶಾಂತಿಯು ಅದುವೇ ದಿನ, ನಿಶ್ಚಯವು.

**ಸಿಂಹ:—** ಅದಕೇ ಪೇಳುವೆ ನನ್ನಯ ಮುದ್ದು,
ಕರಡಿಯು ಸೇರಲಿ ಬೇಟೆಗೆ ಖುದ್ದು,
ನಾನೂ ಅರೆಯುವೆ ನವೀನ ಮದ್ದು.

**ಕರಡಿ:—** ಅರರೆ! ಏನದು ಅಂತಹ ಮದ್ದು?
ಇಲ್ಲಿಯವರೆಗೂ ತೆಗೆಯದೆ ಇದ್ದು,
ಈಗೇನ್ ಬರುವುದು? ನಂಬುಗೆ ರದ್ದು.
ಆಗಲಿ ತೋರಿಸು; ಗೆಲುವೇ ಮುದ್ದು!

**ಸಿಂಹ:—** ನಾಳೆಯೆ ಸಾಗಲಿ ಸಿದ್ಧತೆಯೆಲ್ಲ!
ನಿನ್ನಯ ಕೆಲಸವ ನೀ ಗೈಯ್ಯೆಲ್ಲ.
ಯಶದಲಿ ಎಂತು ಸಮಪಾಲಲ್ಲ!
ಸಮರದ ಭೀತಿಯೆ ಇನ್ನೆಮಗಿಲ್ಲ.

[ಪರಸ್ಪರ ಸಖ್ಯ, ಅನುಮಾನಗಳಿಂದ ಅವು ಚೆದರುವುವು. ಆಗ ದಣಿದ ಚಿರತೆಯು ಮೈಸವರಿಕೊಳ್ಳುತ್ತ ಕಾಲಿರಿಸುವುದು]

**ಚಿರತೆ:**— ಎಷ್ಟದು ನನಗೆ, ದಣಿವು ಬೇನೆ.
ಗೆಲುವಿನ ಬಾವುಟ ಹಿಡಿದವ ನಾನೆ,
ತೋಳದ ಸಾವಿಂ ಏನೋ ಗುಮಾನೆ,
ಆದರು ದಣಿವಿಗೆ ಕಾರಣವೇನೆ?
ತಿಳಿಯಿತು, ತಿಳಿಯಿತು—ಹೊಟ್ಟೆಯ ಬೇನೆ,
ಪಚನಕು ಮೀರಿ ತಿಂದೆನು ತಾನೆ!
ಕರು ಹುಲ್ಲೆಗಳನು, ಮೇಲ್ ಬರ್ಮ ಆನೆ!
ನನ್ನಿಂ ನನಗೇ ಬಂದಿದೆ ಬೇನೆ.

[ಹೀಗೆ ಅನ್ನುತ್ತಿರುವಾಗಲೇ ಬೆಂಗಡೆಯಲ್ಲಿ ಕರಡಿಯು ಬಂದು, ಆದರ ಬಾಲವನ್ನು ಮೆಟ್ಟಿ, ಹಲ್ಲುಗಳನ್ನು ಕಿರಿಯುವುದು]

ಏನಿದು ಕರಡಿ, ನಿನ್ನೋಟವೆ ಘೋರ!
ನನಗು ನಿನಗು ಸ್ನೇಹವೆ ಸಾರ.
ಇಂತಿರೆ ಹಲ್ಲನು ಮಸೆಯುವಿ ಏಕೆ?
ಗೆಳೆತನ ಎಂಬುದು ನಿಜವೇ, ಡೋಕೆ?

**ಕರಡಿ:**— ಸ್ನೇಹವದೆಲ್ಲ ನಿನ್ನೆಯ ತನಕ,
ಅರಿತೆನು—ನೀನೇ ಜಗಳದ ಜನಕ,
ಆದರಿಂ ಬಾರದು ನಿನ್ನಲಿ ಮರುಕ,
ಶರಣಾಗೈ ನೀ, ಬದುಕೇ ಕನಕ!

**ಚಿರತೆ:**— ತೋಳದ ಮಾತಿಗೆ ಕಿವಿಗೊಡದಾದೆ,
ನಿನ್ನಾ ಸ್ನೇಹಕೆ ಮೋಸವ ಹೋದೆ.
ಬಂದಿತು ಈ ದಿನ ಅತೀವ ಬಾಧೆ
ಹೊಡುವೆ ಸಂಗರ—ಗೆದ್ದರೆ ಗೆದ್ದೆ.

[ಕಾದಾಟವಾಗುತ್ತಿರುವಾಗ ಸಿಂಹನು ಚಿರತೆಯ ಮುಸುಡಿನ **ಬಳಿ** **ಭಾ**ರಿಯ 'ಬಾಂಬೊ'ಂದನ್ನು ಎಸೆಯುವುದು. ಬೆಂಕಿಯು ಉಜ್ವಲವಾಗಿ ಆದರ ಮುಸುಡು ಸುಡುವುದು. ದೂರದಿಂದ ಸಿಂಹ, ನರಿಯುರು ನಗುತ್ತ ನಿಲ್ಲುವರು]

ಉರಿ, ಉರಿ, ಉರಿ ತಾಳಲಾರೆ,
ಮರಿಗಳಿಗಾಗಿ ಉಳಿಯಲಾರೆ

ದವ್ಮ್ರಯು ತಡೆಯಿರಿ—ಅಣುವಿನ ಧಾಳಿ
ಶರಣಾಗಿಹೆನು ಕರುಣೆಯ ತಾಳಿ

[ಶರಣಾದ ಚಿರತೆಯನ್ನು ಮೆಟ್ಟಿ ಸಿಂಬ ನಿಂತರೆ, ಸಿಂಹನ ಬಾಲವನ್ನು ಹಿಡಿದು ನರಿ ನಿಲ್ಲುವುದು. ಕರಡಿಯು ಅಸೂಯೆಯಿಂದ ನೋಡುತ್ತಿದೆ]

**ಕರಡಿ:—** ಅರೆ, ಅರೆ, ಅರೆ—ಹೆಚ್ಚಿನ ಮಾಟ
ಸಿಂಬನ ಮುದ್ದದು ಆಟಂ ಸ್ಫೋಟ.
ಚಿರತೆಯ ಮೆಟ್ಟಿ ನಿಂತಿರೆ ಸಿಂಬ—
ತಾವಿಲ್ಲೆನಗೆ—ಆದೆನೆ, ಹುಂಬ!

[ಕರಡಿಯು ಕುಪಿತವಾಗಿ ಹಿಂದೆ ಸರಿಯುತ್ತಿರುವುದನ್ನು ಕಂಡು]

**ನರಿ:—** ಗೆಳೆಯ ಜಾಂಬವ ದುರುಗುಡ ಬೇಡ.
ಉಂಟು ಕೆಲಸ ಸಾವಿರ, ನೋಡ!
ಮಾಡುವ ಕೂಡಿಯೆ ವಿಜಯದ ಹಬ್ಬ,
ತಾಳುವ ಶಾಂತಿಯ ದಿವಸಕೆ ಉಬ್ಬ!

**ಕರಡಿ:—** ಆಗಲಿ, ಆಗಲಿ—ಗುಡ್ ಬೈ—ನಿಮಗೆ
ಹೇಗೂ ಉಳಿದಿದೆ ಲೋಕದ ಹಸುಗೆ

[ಹೋಗುತ್ತ ಯೋಚಿಸುವುದು]

ನನಗೂ ಬಲಿಷ್ಟರಾಗುವರಿವರು,
ತಡೆಯುವ ತನಕ ಸುರಿಸುವೆ ಬೆವರು;
ಶಾಂತಿಯ ದಾರಿಯು ತಗ್ಗು, ತೆವರು
ಮುಷ್ಟಿಯ ಕಟ್ಟುವೆ—ಗುರಿಯದು ಎದುರು!

[ತೆರೆಳುವುದು]



## ಅಂಕ. ೫

[ವಿವಿಧ ಮೃಗಗಳು ದಣಿದಿದ್ದರೂ ಉತ್ಸಾಹಗೊಂಡು ಗುಂಪಾಗಿ, ಒಂದೊಂದಾಗಿ ಶಾಂತಿಯ ಸಂತೆಗೆ ಹೊರಟಿರುವ ಹಾದಿಯಲ್ಲಿ]

**ದನ:—** ಶಾಂತಿಯು ಒಸಗೆಯ ಕೇಳಿದೆನಾಯ್ತು
ಮನೆಯಲಿ ನೆಮ್ಮದಿ ಇಲ್ಲದೆ ಹೋಯ್ತು.
ಕರುಗಳು ತಾಯಿಯ ಹೆಗೆ ಹೊತ್ತಿರಲು,
ಚಿರತೆಯು ಮಡಿದರು ತಪ್ಪದು ಉರುಳು.
ಹೆತ್ತಿನೆ ನಾನು, ಮರಿಗಳ ಬಹಳ
ಅವುಗಳೆ ಎನಗೆ ಮೃತ್ಯು, ಕೋಳ!
ಕರಡಿಯು ಹಾಲಿಗೆ ಬಾಯ್ಬಿಡುತಿಹವು,
ತಾಯಿಯ ಹಿತವನು ತಾವ್ ಮರೆತಿಹವು,
ಆದರು ಪ್ರೋಪೆನು ಶಾಂತಿಯ ಕೂಟಕೆ
ಕರಡಿಯ ತಡೆಯಲು ಮಾಡುವ ಹೂಟಕೆ.. [ತೆರಳುವುದು]

**ಟರ್ಕಿಕೋಳಿ:—** ಲೋಕದ ಕಾಳಗ ತಪ್ಪಿಸಿ ನಿಂತೆ,
ಬೆದರಿ ಬೆದರಿ ಸತ್ತಿಹೆನಂತೆ.
ಕಾಳಗ ನಿಂತಿದೆ—ತೊಡಗಿದೆ ಚಿಂತೆ,
ಯಾರನು ಬೇಡುತೆ ಮೊರೆಯಿಡಲಂತೆ?
ಕರಡಿಯು ಗುರು ಗುರು ಕೇಳಿಸಿ ಎದೆಯು
ಥರಿಸುತ ನಿಂತಿದೆ—ಎಷ್ಟದು ಭಯವು!
ಆದರು ಅಂಬರು ಶಾಂತಿಯ ಯುಗವು,
ಬಂದಿದೆಯಂತೆ—ಆಪುದು ಸಭೆಯು!

[ಮುಂದುವರಿಯುವುದು]

**ಫಾರಸಿ ಬೆಕ್ಕು:—** ಬೆಣ್ಣೆಯ ಕೊಡುವೆನು ಎಂದಾ ನರಿಯು
ಮಾತಿಗೆ ಕಟ್ಟಿದೆ—ಅದುವೆ ಸರಿಯು!
ಅವರಿಂದೊದಗಿದೆ ಕರಡಿಯ ಹಗೆಯು.
ಬಾಲವ ಕಡಿದಿದೆ—ಏನದು ಉರಿಯು!
ಆದರು ಲೋಕದ ಶಾಂತಿಯ ಹಬ್ಬ,
ಹೋಗುವ ಜನರಲಿ ನಾನೂ ಒಬ್ಬ.
ಅನ್ನಲು ಅಲ್ಲ—ಅನ್ನಿಸಿಕೊಳಲು
ಕಿರಿಯರ ಪಾಲಿಗೆ ಆಳ್ತನ, ಆಳಲು [ತೆರಳುವುದು]

**ಹಲವಾರು ಪ್ರಾಣಿಗಳು ಒಕ್ಕೊರಳಿನಿಂದ:—**

ಶಾಂತಿಯು ಸಂತೆಯು ತುಂಬಾ ಸ್ತುತ್ಯ!
ಹಿರಿಯರು, ಕಿರಿಯರು ಎಲ್ಲರು ಮುಖ್ಯ.

**ಕುರಿ:—** ಕರಿಯರು, ಬಿಳಿಯರು ಎಲ್ಲರು ಮುಖ್ಯ,

**ಪ್ರಾಣಿಗಳು:** ಎಲ್ಲರು ಮುಖ್ಯ, ಎಲ್ಲರು ಮುಖ್ಯ.
ಶಾಂತಿಯ ಬಾವುಟ ಅಲ್ಲಿಯೆ ಹೊಡಿ
ಕಳೆಯುವ ಕೊಳೆಯನು, ಯುದ್ಧದ ರಾಡಿ!

[ಎಲ್ಲವೂ ಜಯಗೀತೆಯನ್ನು ಹಾಡುವುವು.]

ಯುದ್ಧದ ಹಿಂಸೆಯು ಮುಗಿದಿಹುದು
ಶಾಂತಿಯ ಸುದಿನವು ಬಂದಿಹುದು,
ಭಾವೀ ಕಾಳಗ ಬಹಿಷ್ಕರಿಸಿ,
ಸ್ವಾತಂತ್ರ್ಯ ಬೆಳಕನು ಮಿಗೆ ಉರಿಸಿ
ಊದುವ ಸಂಸ್ಕೃತಿ ತುತ್ತೂರಿ
ಪ್ರಗತಿಯು ಬೆಳೆಯಲಿ ಬೇರೂರಿ!

[ಮುಂದೆ ಸಾಗುವುವು]

[ನರಿ, ಸಿಂಹರು ಹೆಗಲಮೇಲೆ ಹೆಗಲಿರಿಸಿಕೊಂಡು ಬರುವುವು]

**ನರಿ:—** ಸಿಂಬನೆ ನೀನು ಯೋಚಿಪುದೇನೆ?
ನನಗೂ ಬಂದಿದೆ ತಲೆಬೇನೆ.
ಗೆದ್ದುದು ಅಂತು ನಿಜವಿಹುದಲ್ಲ,
ಇದ್ದುದ್ದುಳಿಸಲು—ಬಹು ಕಠಿಣಲ್ಲ.
ಒಂದೆಡೆ ಎಳೆಯರ ಕೂಗೇ ಕೂಗು—
ಸ್ವಾತಂತ್ರ್ಯ ಕಾಂಕ್ಷೆಯು ನವೀನ ಸೋಗು!

**ಸಿಂಹ:—** ಅದಕೂ ಹಿರಿಯದು ನನ್ನೀ ಭೀತಿ:
ಕರಡಿಯ ಮೌನದ ಕಟುನೀತಿ.
ಆಟಂ ಬಾಂಬಿನ ಗುಟ್ಟಂತೆ
ಅದಕೂ ಸಮಪಾಲ್ ಬೇಕಂತೆ.

**ನರಿ:—** ನಾಳಿನ ಭೀತಿಯೆ ಕರಡಿಯದಿಹುದು.
ಬಿಗ್ ತ್ರೀಗೆ ಬಗ್‌ಬೇರ್ (bug-bear) ನಿಜವಿಹುದು,
ಗುಟ್ಟನು ಬಿಟ್ಟರೆ—ಮುಗಿಯುವುದು

ನನಗೂ ನಿನಗೂ ಸೋಲಹುದು.
**ಸಿಂಹ:—** ಅದುವೇ ಯೋಚನೆ ನನಗೆಂದೆ
ಕತ್ತಿ, ಕೊಡತಿ ಕಣ್ಮುಂದೆ!
ಕರಡಿಗೆ ಕೊಬ್ಬು ಬಂದಿಹುದು
ನಮ್ಮೆಲ್ಲನಂಬಿಕೆ ಹೋಗಿಹುದು,
**ನರಿ:—** ನಂಬಿಕೆ ಮೊದಲೂ ಎಲ್ಲಿತ್ತು?
ಆಪದ್ಧರ್ಮಕೆ ಜೋತಿತ್ತು,
ಕಾಳಗ ಕಳೆಯಿತು, ಸ್ನೇಹವೆ ಸರಿಯಿತು
ಯುರೋಪರಣ್ಯವೆ ಅದಕಾಯ್ತು!
ತೋಳನ ಬಾಯಿಂ ತಪ್ಪಿಸಿ ಕೋಳಿಯ
ಕರಡಿಯು ಬಾಯಿಗೆ ತೆತ್ತೆವಲಾ!
ಮತ್ತಾ ಮೊಲವನು ಅಲ್ಲಿಯೆ ಬಿಟ್ಟರೆ—
ಅದುವೂ ಕರಡಿಗೆ ಸಂದಿತಲಾ
ಆಟಂ ಬಾಂಬಿನ ಗುಟ್ಟನು ಬಿಟ್ಟರೆ
ನಾಶವು ನಮ್ಮದು ಬರೆದಿಡಲಾ!
**ಸಿಂಹ:—** ಆಟಂ ಬಾಂಬಿನ ಗುಟ್ಟನು ಬಿಡೆನಾ
ಬಿಟ್ಟರು ಶಾಂತಿಯ ಕೂಟಕ್ಕೆ.
ಶಾಂತಿಯು ಸಾಗರ ತಡಿಗಳ ಕಾಯುವೆ,
ಕರಡಿಯೊಳ್ ಮಮತೆಯು, ನೋಟಕ್ಕೆ.
**ನರಿ:—** ಯುರೋಪರಣ್ಯದ ಅರ್ಧದಿ ಆದರು
ನನ್ನಯ ಓಡಾಟ—
ಉಳಿದರೆ ಬದುಕಿದೆ, ಇಲ್ಲದೆ ಹೋದರೆ
ಪ್ರಾಣಕ್ಕೆ ಪೇಚಾಟ,
ತೆರಳುವ ಬೇಗನೆ, ವೇಳೆಯು ಆಯಿತು,
ಶಾಂತಿಯ ಕೂಟಕ್ಕೆ
ಮನವದು ಅನುತಿದೆ 'ಶಾಂತಿಯು ಹೋಯಿತು—
ಇದೆಲ್ಲ ಆಟಕ್ಕೆ.'
[ಅವುಗಳೆರಡೂ ಜತೆಯಿಂದ ಸಾಗುವುವು]

**ಕರಡಿ:—** ವಿಟೊ (Veto)ದ ಭಜನೆ ಎಲ್ಲಾರೋಗಕೆ
ಒಂದೇ ಮದ್ದೆಂದು
ಯಾರೋ ದಾಸರು ಅಂದುದು ನಿಜಕೆ
ಮರೆಯೆನು ನಾನೆಂದು,
ಆಟಂ ಹಂಚಿಕೆ ಸಲಿಸದೆ ಹೋದರೆ
ಬಿಟ್ಟೇನೆ ಎಂದೆಂದು
ವಿಟೋದ ಭಜನೆ— ತೆಗೆಯುವೆ ಮಾತಿಗೆ
ಜಗ ಕಾಲಿಗೆ ಬರುವಂದು.
ನಿಂತರೆ ವಿಟೊ, ಕುಳಿತರೆ ವಿಟೊ
ಅದುವೆ ಮಂತ್ರವಲಾ
ಮಾತಿಗೆ ಮುಂಚೆಯೆ ನನ್ನಯ ವಿಟೊ
ಅದುವೆ ತಂತ್ರವಲಾ

[ನಗುತ್ತ ಸಾಗುವುದು]

---

## ೬ ನೆಯ ದೃಶ್ಯ

[ಶಾಂತಿ ಕೂಟ ಸೇರಿದೆ. ಎಲ್ಲ ಪಶುಗಳೂ ಪಸನ್ನಮುಖಿಗಳಾಗಿವೆ]

**ನಾಯಿ:—** ಶಾಂತಿಗೆ ಗೆಲುವೈ, ಶಾಂತಿಗೆ ನಿಲುವೈ
ಶಾಂತಿಯು ಮಕ್ಕಳಿರ.
ಶಾಂತಿಯು ಹಿತವೈ, ಶಾಂತಿಯು ಮತವೈ,
ಕೂಟದಿ ಬೆರೆಯಿರೆಲ.

[ಕಿರಿಯ ಪ್ರಾಣಿಗಳು ಎದ್ದು ನಿಂತು ಅದನ್ನು ಸಮರ್ಥಿಸುವುವು. ಆಗ ಕರಡಿಯ ಆಗಮನವಾಗುವುದು]

**ಕರಡಿ:—** ಯಾರದು ಅದುವೆ, ನಮ್ಮನು ಕೇಳದೆ
ಶಾಂತಿಯ ಹಾಡಿವರು?
ವಿಟೋವ ಗೈದಿಹೆ, ಮುಚ್ಚಿರಿ ಬಾಯನು

ಇನ್ನೊಮ್ಮೆ ತೊಡಗಿರೆಲ.
ಶಾಂತಿಯು ಪ್ರಶ್ನೆಯು ದೂರದ ಪ್ರಶ್ನೆ
ಮೊದಲಿಗೆ ಬೇಕೆನಗೆ--
ಎಲ್ಲರ ಭೀತಿಯು ತೊಲಗುವ ತೆರದಲಿ
ಆಟಂನ ಗುಟ್ಟು, ಬಗೆ.
ಆಟಂ ಗುಟ್ಟನು ಕರಡಿಗೆ ಸಲಿಸದೆ
ಇದ್ದರೆ ನಂಬುವೆನೆ?
ಕೊಡದೆ ಹೋದರೆ, ನಿದ್ರೆಗು ಬಿಡುವೆನೆ
ಬರಿಸುವೆ ತಲೆಬೇನೆ.

**ಸಿಂಹ:—** (ಎದ್ದು ನಿಂತು)
ಸಿಂಬನು ತಿನ್ನನು ಆಟಂ ಬಾಂಬನು
ಒಳಿತಿಗೆ ಕಾಯ್ದಿಹನು,
ಎಲ್ಲರು ನೆಚ್ಚುವ ಮಂಡಲ ಕೂಡಲಿ,
ಅದಕೇ ಸಲಿಸುವೆನು.

**ಕಂಗಾರು:-** ಭೇಷ್, ಭೇಷ್—ಒಳ್ಳೆಯ ಮಾತು
ಇದಕ್ಕೆ ಮತಬರಲಿ;
ಎಲ್ಲರು ಹಲ್ಲು ಉಗುರನು ಕಳಚುತ
ಕೂಟಕ್ಕೆ ಒಪ್ಪಿಸಲಿ.
ಅದರಿಂ ಸುದಿನವು! ಹುಲಿ ಹುಲ್ಲೆಗಳು
ಸೇರುವ ಯುಗ ಬರಲಿ,

**ನರಿ:—** ಒಪ್ಪಿದೆ ನಾನು, ಮಾತಿದು ಚೆನ್ನು!
ಆದರು ಒಂದುಂಟು,
ಶೌರ್ಯವೆ ಇಲ್ಲದೆ ಕುರಿಗಳ ಕಾಯಲು
ಪಾಲಕಗೇನುಂಟು?
ಜಗವನು ಕಾಯುವ ಹೊಣೆಯದು 'ತ್ರೀ'ಗೆ
ಅವರಲಿ ಹಲ್ಲಿರಲಿ.
ಉಳಿದಿಹ ಮೃಗಗಳ ಆಯುಧ ಕಿತ್ತರೆ

ಅದರಿಂ ಶುಭ ಬರಲಿ.

**ಸಿಂಹ:—** ಕರಡಿಯೆ ಇನ್ನೂ 'ವಿಟೋ'ದ ಸ್ಮರಣಿಯೆ
ಏನದು ನಿನ್ನ ಮತ?

**ನರಿ:—** ನ್ಯಾಯದ ಮಾತಿಗೆ ಕರಡಿಯು ತಾನು
ಒಪ್ಪದೆ ಇದ್ದೀತ?

**ಕರಡಿ:—** ಜಗವನು ಕಾಯುವ ಹೊಣೆಯದು ನಾಳೆಗೆ
ಆಟಂ ಗುಟ್ಟಿನ ಕತೆಯೇನು?

**ನೊಲ:—** ನಿಜ ನಿಜ, ಆಟಂ ಬಾಂಬಿನ ಗುಟ್ಟೇನು?

**ಕೋಳಿ:—** ಕೋಳಿಗೆ ಕೊಡುವ ಪಾಲೇನು?

**ಸಿಂಹ:—** ಅನ್ನಲೆ ನಾನು—ಕೊನೆಯೊಂದು ಮಾತ,
ಶಾಂತಿಯು ಬರಲಿ, ನಾ ಸಂಪ್ರೀತ.
ಆಟಂ ಗುಟ್ಟನು ಜಗಕ್ಕೆ ಒಪ್ಪಿಸೆ
ನಾನೇ ಮುಂದಕೆ, ಒಂದೇ ಕಸವಿಸಿ—
ಎಲ್ಲಾ ಆಯುಧ ಕೂಟಕೆ ಸಲಿಸುವ
ಕೂಟದ ನೆರೆಯಲಿ ಎಲ್ಲರು ಬದುಕುವ.

**ನರಿ:—** ಸಿಂಬನ ಮಾತೇ ಮಾತದು ನೋಡಿ,
ಕಪಟವೆ ಇಲ್ಲವು—ಖಾಡಾ ಖಾಡಿ.
ಎಲ್ಲರ ಮನೆಯನು ಜಡತಿ ಮಾಡುವ
ಹಕ್ಕಿರೆ ಕೂಟಕ್ಕೆ
ಶಾಂತಿಯು ಖಂಡಿತ, ಕದನವೆ ವರ್ಜಿತ
ಕರಡಿಯ ವೋಟ್ ಬಕ್ಕೇ?

**ಕರಡಿ:(ಆ)** ಕರಡಿಯು ಮನೆಯ ಜಡತೀ ಯೋಚನೆ
ಕೂಡದು—ಯಾರಿಂದ.
ಭಂಡರು ಸೇರಿ ಗವಿಯನು ಹೊಕ್ಕರೆ
ಉಳಿಯೆನು ನಾನೆಂದು.
ನನ್ನದು ನನಗೆ, ನಿಮ್ಮದು ನನಗೆ
ಅದುವೆ ವಿಶ್ವಾಸ.
ಇಲ್ಲದೆ ಹೋದರೆ ಎಲ್ಲಿನ ಬೆಸುಗೆ

ನಿಮ್ಮದು ಬರಿಮೋಸ.

**ಸಿಂಹ:—** ಉತ್ತರವೇನು—ಶಾಂತಿಯ ಭಿಕ್ಷೆಗೆ.

**ನರಿ:—** ಉತ್ತರವೇನು ಶಾಂತಿಯ ರಕ್ಷೆಗೆ—

**ಕರಡಿ:—** ಅಂದಾಯಿತಲ—ಆಟಂ ಮೊದಲು,
ಅದಿಲ್ಲದ ಶಾಂತಿಯು ಬರಿ ಬಯಲು.

**ನಾಯಿ:—** ಗಂಟಿನ ಪ್ರಶ್ನೆಯ ಮುಂದಿರಿಸುತ್ತೆ
ಬೇರೆಯೆ ಚರ್ಚಿಸುವ—

**ಬೆಕ್ಕು:—** ಕರಡಿಯು ನನ್ನಯ ಬಾಲವ ಕಚ್ಚಿದ
ವಿಷಯವ ತಂದಿಡುವ—

**ಕರಡಿ:—** ನನ್ನಯ ವಿಷಯಕೆ—'ವಿಟೋ'ವ ತಂದೆನು,
ಉಳಿದುದ ಚರ್ಚಿಸಿರಿ!

**ಕಂಗಾರು:-** ಈ 'ವಿಟೋ'ದ ಭಜನೆಗೆ ಕೊನೆಯದು ಬಾರದೆ,
ಕೂಟವೆ ವ್ಯರ್ಥ ಸರಿ!

**ಬಿಗ್ ತ್ರೀ:—** 'ವಿಟೋ'ದ ಭಜನೆಯು ಶಾಂತಿಗೆ ಮುಖ್ಯ,
ಅದರಿಂ ಬೆಳೆವುದು ಲೋಕದ ಸಖ್ಯ,
ಬಲಿಷ್ಟರೊಳಗೆ ಬೇಕೆಲೆ ಐಕ್ಯ
ವಿಟೋವೆ ಅವರ ಶಾಸನ ವಾಕ್ಯ!

**ಕರಡಿ:—** 'ವಿಟೋ'ದ ಜತೆಗೆ ಆಟಂ ಗುಟ್ಟು,
ಕರಡಿಯ ಸ್ನೇಹಕೆ ಅವಶ್ಯ ಒಟ್ಟು.
ಅಲ್ಲಿಯ ತನಕ ಚರ್ಚೆಯು ಹೊಟ್ಟು
ಸಲಿಸುವ ತನಕ ಗೆಳೆತನ—ಟೂ ಟು—. . .



# ಪಾತ್ರ ಪರಿಚಯ

ಈ ನಾಟಕದಲ್ಲಿ ಜೀವಂತ ಪಾತ್ರಗಳಿಗೆ ಬೆಂಬಲವಾಗಿ—ಕದಳಿ, ಅಶ್ವತ್ಥ, ಕಳೇಬರ, ಗುಡುಗು, ಮಿಂಚುಗಳು ಹಿನ್ನಲೆಯಾಗಿ, ಭಾವನೆಯ ರೂಪದಲ್ಲಿ ಪಾತ್ರವನ್ನು ವಹಿಸುವುವು. ನಾಟಕವು ಛಾಯಾ ನಾಟಕದ ರೂಪವಾಗಿ ಪ್ರಕಟವಾಗುವುದರಿಂದ ಇದು ಪ್ರದರ್ಶನ ಸಾಧ್ಯ. ಇನ್ನು ಇದರಲ್ಲಿ ಬರುವ ಮನುಷ್ಯ ವ್ಯಕ್ತಿಗಳು—ಮಾನವ ಕುಟುಂಬಕ್ಕೆ ಸೇರಿದ ಶ್ರಮಗಾರ, ಬಂಡವಳುಗಾರರ ಜೀವನ ಸಮಸ್ಯೆಯನ್ನು ಸಾಂಕೇತಿಕ ವಾಗಿ ಚಿತ್ರಿಸುವರು

**ಭೂದೇವ:**—ಊರ ಅರಸ. ಪರರ ಬೆವರು ಅವನ ಜೀವನಾಧಾರ.

**ಭವದೇವಿ:**—ಅವನ ಆರಾಧ್ಯ ದೇವತೆ—ಮೂಕಳಾಗಿದ್ದರೂ ಕಟ್ಟಳೆಯು ಕಟ್ಟುಪಾಡಿನಿಂದ ಅರಸನನ್ನು ಅಂಧನನ್ನಾಗಿ ಮಾಡಿರುವ ಶಕ್ತಿ.

**ಭೂದೇವಿ:**—ಅರಸನ ಮಡದಿ, ಅಜ್ಞಾನದಲ್ಲಿ ಅವಳಿಗೂ ಸಮ ಪಾಲು.

**ದರ್ಪಣ:**— ರಾಜಕುಮಾರ. ಆತ್ಮ ವಿವೇಚನೆಯ ಸಂಕೇತ.

**ಭೂಸುತ:**— ಶ್ರಮಗಾರರ ಸಂಕೇತ. ಭೂಸುತನ ತಂದೆ, ಸೇನೆ— ಇತ್ಯಾದಿ, ಇತ್ಯಾದಿ.

## ಅಂಕ ೧

### ದೃಶ್ಯ ೧

(ವಿಶಾಲವಾದ ಬಯಲುಗಾವಲೊಂದು. ಉದಯಿಸುವ ಸೂರ್ಯನು ಬೆಳಗತೊಡಗಿರುವನು)

**ನೇಪಥ್ಯ:—** ಬೆಳಗಾಯ್ತು ! ಬೆಳಗಾಯ್ತು !

ರವಿಯುವನು ಮೂಡುತಿಹ, ಕಿರಣಂಗಳೆಲ್ಲವನು
ಕಳುಹುತಿಹನೆಲ್ಲೆಲ್ಲು; ದೊರೆಯ ಬೆದರಿಕೆಗಂಜಿ
ಕೊಳದಿ ತೂಕಡಿಸುತಿಹ ತಾವರೆಗಳೆಲ್ಲವನು
ಏಳಿ, ಏಳೆನ್ನುತಲಿ ಅರಳಿಸುತಿಹನವನೀಗ.
ಅರಸ ಏಳುವ ಗಳಿಗೆ ಬಂತೆಂದು ಬೆದಬೆದರಿ
ಉಷೆಯುನಟ್ಟಿಹನಯ್ಯ ಹಕ್ಕಿಗಳನೆಚ್ಚರಿಸೆ.
ಪಕ್ಷಿಕೂಟವದೆಲ್ಲ ಮೆಲ್ದನಿಯೊಳ್ ಹಾಡುತಿವೆ-
'ಭೂದೇವ, ಈ ಇಳೆಗೆ ತಾಮಹದೇವ'ನೆಂದು.
ಭೂದೇವನಾ ಹೆಸರ ಕೇಳದಿಹ ನರನುಂಟೆ?
ಭೂದೇವನಪ್ಪಣೆಗೆ ಅಲ್ಲೆಂದ ಹುಳುವುಂಟೆ?
ಭೂದೇವನಿದ್ದೆಡೆಗೆ ಬಗ್ಗದಿಹ ಶಿರವುಂಟೆ!
ಅವನಾಡಿದುದೆ ಆಜ್ಞೆ, ಎಣಿಸಿದುದೆ ನಿರ್ಧಾರ,
ತಾ ಗೈದುದೇ ಕರ್ಮ, ಚರಿಸಿದುದೆ ನಿಜ ಧರ್ಮ!
ಭೂದೇವ ದೊರೆಯಿಹನು; ದೊರೆಗಳಿಗೆ ದೊರೆಯಿಹನು.

### ದೃಶ್ಯ ೨

(ವಿಶಾಲವಾದ ಬಯಲೊಂದರಲ್ಲಿ ಆಲದ ಮರವೊಂದು ಎಲ್ಲೆಲ್ಲೂ ಬೇರು ಹರಡಿ ನಿಂತಿರುವುದು.)

**ನೇ:—** ಭೂದೇವನೆಂಬವನು ಆರ್ತಿಗಳಿಗಾಸರೆಯು!
ಬಿಸಿಲಜಳದೊಳು ತಾನು, ದಣಿದವಗೆ ವಟವೃಕ್ಷ

ಚಿರವಾದ ಹಿಡಿತವನು ನೆಲದೊಳಗೆ ನಿಲ್ಲಿಸುತೆ,
ಹಕ್ಕಿಪಕ್ಕಿಗಳಿಂಗೆ, ಪಶುಪ್ರಾಣಿಗಳಿಂಗೆ,
ನರನಾರಿಯರಿಂಗೆ ಆಸರೆಯ ಕೊಡೆಹಿಡಿದು
'ಧರೆಯೊಳಗೆ ಗತಿಯಿಲ್ಲದವರಿಲ್ಲ' ಎಂದಿಹನು,
ನೆಚ್ಚಿ ಬಂದವರಿಂಗೆ ಒಡಲ ಹಂಚುತಲಿಹನು;
ನಂಬಿ ಬದುಕುವರಿಂಗೆ ಸಕಲವಿತ್ತಿಹನು.
ಕೊಂಡಾಡಿ ಜನವೃಂದ, ಕೊಂಡಾಡಿ ದೊರೆಯಿವನ
'ಚಿರವಾಗಿ ಜಗವಿದನು ಆಳಿ ಹರಸಲಿ' ಎಂದು.
ಮೊಳಗುತಿದೆ ಕೇಳಿರೈ! ನಭವನೊಡೆಯುತಲಿಹುದು
ವೀರ ಸೇನೆಯು ಘೋಷ! ಭೂದೇವನಾಳುಗಳು!
ಬರಿಯ ಆಳುಗಳಲ್ಲ; ಸೇನಾಳುಗಳವರು.
ಹೊರಟಿಹರು ಜಯಘೋಷಗೈಯ್ಯುತ್ತ!
'ಶುಕ್ರವಾರವು ಇಂದು ಶುಭವಾರ' ಎಂದು.
ದೊರೆಯಿಂದು ಕುಲದ ಮೇಲ್ ಕೃಪೆಯ ಛತ್ರವ ಹಿಡಿದ
ಭವದೇವಿ-ಭವಶಕ್ತಿ-ಭವಮಾಯೆ ಅವಳಿಂಗೆ
ರಕ್ತಕಾಣಿಕೆ ಸಲಿಪ ಶುಭದಿನವು ಇದು ಇಹುದು.
ಭವದೇವಿ ಕೃಪೆಯಿತ್ತು ತನ್ನ ಕುಲವನು ಹರಸೆ,
ರಕ್ತಕಾಣಿಕೆಯನ್ನು ಸಲಿಸುವನು ದೊರೆರಾಯ
ರಕ್ತಕಾಗಿಯೆ ತಾನು, ನೂರಾರು ಜೀವಗಳ
ಶಕ್ತಿವಿೂರುತೆ ಸಾಕಿ, ಸಲಹುತಿಹ—ಅಚ್ಚರಿಯು!
(ದೂರದಲ್ಲಿ ರಾಜಸೇನೆಯು ಗದ್ದಲ ಕೇಳಿಸುವುದು)
ನಿಶ್ಶಬ್ದ! ನಿಶ್ಶಬ್ದ! ಮೌನವನು ತಾಳಿರೈ
ರಾಜಸೇನೆಯು ಅದುವು, ರಾಜ ಛಾಯೆಯು ನಿಜವು

## ದೃಶ್ಯ ೩

(ರಾಜಸೇನೆಯು ಹಾಡುತ್ತ ಸಾಗುವುದು.)

**ಸೇನೆ:—** ಜಯುವೆನ್ನಿ ಜಯುವೆನ್ನಿ ಜನರೆ।
ಜಯುವೆನ್ನಿ ಭೂದೇವನವಗೆ ಸಜ್ಜನರೆ ॥ ಪಲ್ಲ ॥

ಆಳಿ ಪೊರೆಯುವ ದೊರೆಯು, ಕಾಳನೀಯುವ ದೊರೆಯು ।
ವೈರಿಗಳ ಧಾಳಿಯಿಂ ರಕ್ಷಿಸುವ ದೊರೆಯು ॥ ೧ ॥

ಊರಜನರೊಳು ಭಕ್ತಿಶ್ರದ್ಧೆಗಳು ಉಳಿವಂತೆ ।
ನೇಮನಿಯಮವ ಹೊತಿ ಕಾವ ದೊರೆಯು ॥ ೨ ॥

ದುಷ್ಟರನು ದಂಡಿಸುತೆ ಶಿಷ್ಟರನು ಪಾಲಿಸುತೆ ।
ಭವದೇವಿ ಪೂಜೆಯೊಳು ಮಗ್ನ ದೊರೆಯು ॥ ೩ ॥

ನಿಮಗಾಗಿ ಆಳುವನು, ನಿಮಗಾಗಿ ದಣಿಯುವನು ।
ನಿಮಗಾಗಿ ಕಾದುವನು ಸಮರದೊಳಗೆ ॥ ೪ ॥

ಇಂಥ ದೊರೆಯನು ಕಂಡು ಎಂಥ ಒಡಲದು ಉಬ್ಬಿ ।
ಜಯಘೋಷ, ವರತೋಷ ಸಾರದಿರದು ॥ ೫ ॥

ಇಂದಿನಾ ದಿನ ಅದುವೆ ಶುಭದಿನವು ನಿಜ ನಿಜದಿ ।
ವಾರಕೊಂದೇ ದಿನವು—ಶುಕ್ರವಾರ ॥ ೬ ॥

ಅರಸತಾನವನಿಂದು ಭವದೇವಿಯವಳಿಂಗೆ ।
ರಕ್ತಕಾಣಿಕೆ ಸಲಿಪ ಶುಭದ ದಿನವು ॥ ೭ ॥

ಬಂದು ನೆರೆಯಿರಿ ಬೇಗ, ಮುಂದೆ ಬನ್ನಿರಿ ಬೇಗ ।
ಉಕ್ಕುತಿಹ ಬಿಸಿರಕ್ತ ಹರಕೆ ಸಲಿಸೆ ॥ ೮ ॥

ಒಂದೊಂದು ಹನಿರಕ್ತ, ಒಂದೊಂದು ಹಿಡಿಹೊನ್ನು; ।
ಮುಂದಿನಾ ಜನ್ಮದೊಳು ಸ್ವರ್ಗವಿನ್ನು ॥ ೯ ॥

## ದೃಶ್ಯ ೪

(ವಿಶಾಲವಾದ ಮೈದಾನು, ಮೋಡಗಳು ಕವಿಯುತ್ತವೆ, ಸಿಡಿಲು ಘೋರ್ಗರೆಯುವುದು.)

**ನೇ:—** ನಿಶ್ಶಬ್ದ, ನಿಶ್ಶಬ್ದ
ಮೋಡಗಳೆ ಶಾಂತರಾಗಿರಿ ಎಂದೆನಲ್ಲ.
ನಿಮ್ಮ ಕರೆದವರಾರು ಇಲ್ಲಿ?
ಈ ಗಡುಗುಡಿಸುವಿಕೆಯೇನು?
ಕತ್ತಲಿನ ತೆರೆಯ ನೀವೇನ ಕೆಡದಿಹಿರಿ?

ಯಾರು ಕರೆದರು ನಿಮ್ಮ?
ನಾಡಿದುವೆ ಭೂದೇವನದು ಎಚ್ಚರಿರಿ . . . ಎಚ್ಚರಿರಿ . . .
ರಾಜಶಾಸನ ಮೀರಿ, ಬಂದು ಹೋಗಲು ಇದುವೆ
ಅರಸಿಲ್ಲದೂರಲ್ಲ.
ಮೋಡಗಳೆ ಸರಿಯುವುದು, ಸರಿಯುವುದು.
ಭೂದೇವಿ ಪೂಜಿಸಲು
ದೊರೆಯುವನು ಬರಲಿಹನು
ತವಕದಿಂ ಮರೆ ಸರಿದು
ಜೀವದೇಹಗಳನ್ನು — ಉಳಿಸಿಕೊಳ್ಳಿರಿ ಬೇಗ

**ದೃಶ್ಯ ೫**

(ಭೀಕರ ವಾದ್ಯನಿನಾದವು ಕೇಳಿಸುವುದು. ಪಂಜರದಂತಿರುವ ಮನೆಯೊಂದು. ಮಲಗಿರುವ ಭೂಸುತನು ಒಳಗೆ ಬರುತ್ತಿರುವ ಬೆಳಕನ್ನು ಕಂಡು—)

**ಭೂಸುತ:—**

ಮಗು ಅನಾಥ, ಕದ ಮುಚ್ಚು. ಹಾಳಾದ
ಸೂರ್ಯನವ ನನ್ನ ಮನೆಯನು ಬೆಳಗದಿರಲಿ.
ಸಾಗಿತರುವನು ಕೆಡು ದಿನವ ತಿರುಗಿ
ಅನಾಥ! ಬಾಗಿಲನು ಜಡಿ. ಬರುತಿಹರು ದೂತರು . . .

**ಅನಾಥ:—** ಬರುವರೇ, ರಕ್ತಕಾಣಿಕೆಗಾಗಿ ಬರುವರೇ ನನ್ನ ಬಳಿ?

(ಸೇನೆಯ ಗೀತ, ಹಾಡುತ್ತ ಬರುವುದು.)

**ಸೇನಾಳು:—** ಎದ್ದೇಳು! ಎದ್ದೇಳು! ಅಮಂಗಲವೇ ಎದ್ದೇಳು.

(ಬೆದರಿ ಏಳುವನು. ಸೈನಿಕರು ಅವನನ್ನು ಸೆಳೆಯಬರುವರು.)

**ಭೂಸುತ:—** ಇಲ್ಲ, ಬಿಡಿ ಬಿಡಿರಿ. ಈ ದಿಕ್ಕಿಲ್ಲದ ಬಾಲಕನನು
ಕಂಡಾದರೂ ಬಿಡಿರಿ.

(ಘಂಟೆಯಾಗುವುದು. ಸೇನಾಳುಗಳು ಅವನನ್ನು ಸೆಳೆದೊಯ್ಯುವರು.)

ಇಲ್ಲ ದಮ್ಮಯ್ಯ, ಇನ್ನಿಲ್ಲ . . . ಬರಿದಾಗಿದೆ ನನ್ನ ಒಡಲು.

**ಅನಾಥ:—** (ತಂದೆಯನ್ನು ಹಿಡಿದು) ಹೋಗದಿರು ತಂದೆ,
ಈ ಅನಾಥನನ್ನು ಬಿಟ್ಟು ಹೋಗಬೇಡ. (ಸೇನೆಯು ಅವನನ್ನು ತಳ್ಳಿ ಕೆಡವಿ ಅವನ ತಂದೆಯನ್ನು ಒಯ್ಯುವುದು.)

## ಅಂಕ ೨

### ದೃಶ್ಯ ೧

(ಉಚ್ಚವಾದ ಪೀಠದ ಮೇಲೆ ವಿಗ್ರಹವೊಂದಿದೆ. ಅದು ಭವದೇವಿಯ ಮೂರ್ತಿ. ಕೈಯಲ್ಲಿ ವಿವಿಧ ಆಯುಧಗಳಿವೆ. ಹೊರಗಿಂದ ಗಂಭೀರ, ಭೀಕರವಾದ ಸಂಗೀತವಾಗುತ್ತಿದೆ. ಹಲವು ಜನ ಸಿಪಾಯಿಯರು ಒಂದು ಪೀಠವನ್ನೆತ್ತಿ ತರುವರು. ಅದರ ಮೇಲೆ ರಕ್ತದ ಬಟ್ಟಲಿದೆ. ಬಂದವರು ಅದಕ್ಕೂ ಭವದೇವಿಗೂ ನಮಿಸಿ ತೆರಳುವರು.)

ಘಂಟೆ ಬಾರಿಸುವುದು.

ಶಂಖ ವಾದ್ಯವಾಗುವುದು.

ಅರಸನಾದ ಭೂದೇವನು ಗಂಭೀರ ಭಾವದಿಂದ ಪ್ರವೇಶಿಸುವನು. ಕಟಿಯಲ್ಲಿ ಕಠಾರಿ, ಶಿರವಲ್ಲಿ ಕಿರೀಟ, ತೋಳುಗಳಲ್ಲಿ ಭುಜಕೀರ್ತಿಗಳು. ಹಿಂದಿನಿಂದೊಬ್ಬ ಸೈನಿಕನು ಅನುಸರಿಸುವನು. ಅರಸನು ಸನ್ನೆಮಾಡಲು ಅವನು ಧಾವಿಸುವನು. ಒಮ್ಮೆಗೇ ಕಹಳೆಯಾಗುವುದು.

ಎಲ್ಲವೂ ಸ್ತಬ್ಧವಾಗಿ ಕಾಲಸಪ್ಪಳವಿಷ್ಟೆ ಕೇಳಿಸುವುದು.

ಸೈನಿಕರು ಹಾಡುತ್ತ ಬರುವರು. ವಂದಿಸಿ ಶಾಂತರಾಗಿ ನಿಲ್ಲುವರು. ಅವರ ಬಳಿಯಲ್ಲಿ ಕಾಣಿಕೆ ಸಲಿಸುವವರು ನಿಂತಿರುವರು.

ಸೈನಿಕರು ಭಕ್ತರ ಬಾಯನ್ನು ಬಿಗಿಯುವರು. ಅವರ ಉರುಳಾಟ, ಮರುಕಗಳು ಕೇಳಿ ಬರುವುವು,

ರಕ್ತಪೀಠದ ಮೇಲೆ ಒಬ್ಬೊಬ್ಬರನ್ನೆ ತಂದು ನಿಲ್ಲಿಸುವರು. ಅವರ ಜುಟ್ಟನ್ನು ಕಂಬ ಒಂದಕ್ಕೆ ಕಟ್ಟುವರು. ಕಾಲುಗಳನ್ನು ಒತ್ತಿ ಹಿಡಿಯುವರು. ಅವರು ಬಡಿದಾಡುವರು. ಅರಸನು ಅವನ ಕೈಯನ್ನು ಚೂರಿಯಿಂದ ತಿವಿದು, ಹರಿಯುವ ರಕ್ತವನ್ನು ಪಾತ್ರೆಗೆ ಇಳಿಯಬಿಡುವನು. ಜನರು ದಣಿದು ಬೀಳುವರು.

**ವಾದ್ಯವು ಶಾಂತವಾಗುವುದು.**

ಜನರನ್ನು ದೇವಿಗೆ ವಂದಿಸುವಂತೆ ಮಾಡಿ ಒಯ್ಯುವರು. ಘಂಟೆಯು ಮೃದುಗತಿಯಿಂದ ಬಾರಿಸುವುದು. ದೊರೆಯು ಪಾತ್ರೆಯನ್ನು ಅತಿ ಶ್ರದ್ಧೆಯಿಂದ ದೇವಿಯ ಮುಂದೆ ಹಿಡಿಯುವನು. ಅದರಿಂದಲೆ ಒಂದೆರಡು ಹನಿಗಳನ್ನು ಚಿಮುಕಿಸುವನು. ಆ ಮೇಲೆ ಕೈಸನ್ನೆಮಾಡಲು, ಮೂರಾವೃತ್ತಿ ಶಂಖವಾದ್ಯವಾಗುವುದು.

**ಘಂಟೆಯೂ ನಿಲ್ಲುವುದು**

ರಾಣಿಯೂ ರಾಜಕುಮಾರ ದರ್ಪಣನೂ ಬರುವರು. ಬಂದವರು ದೇವರಿಗೆ ನಮಿಸಿ, ರಾಜನಿಗೂ ನಮಿಸಿ ನಿಲ್ಲುವರು. ರಾಜನು ಪಾತ್ರೆಯಿಂದ ರಕ್ತವನ್ನು ತಾನೆತ್ತಿ ಕುಡಿದು ಮಡದಿಗೆ ಕೊಡುವನು. ಅವಳು ಅದರಿಂದ ಕುಡಿದು ಮಗನಿಗೆ ಕೊಡುವಳು.

ಹರುಷದಿಂದ ಎಲ್ಲರೂ ನಗುತ್ತಿರುವರು. ನಗುವು ಎಲ್ಲೆಲ್ಲೂ ಪ್ರತಿಧ್ವನಿಸುವುದು.

ತಾಳದ ಕಿಣಿ ಕಿಣಿ ಕೇಳುವುದು. ಕೊಳಲ ಗಾನವಾಗುವುದು. ಮೂವರೂ ನರ್ತಿಸುವರು.

**ದೃಶ್ಯ ೨**

(ಭೂಸುತನ ಮನೆ. ಬೇಸರದಿಂದ ಬಿಸುಸುಯ್ಯುತ್ತಲಿರುವ ಅನಾಥ)

**ಅನಾಥ:—**

ಕಿಚ್ಚಿನಂದದಿ ಕಾಣುತಿಹೆನು
ಕಿಚ್ಚಿನಂದದಿ ಬೆಳಗುತಿಹೆನು.
ಆಸರೆಯ ಕೊಳ್ಳಿಯನು ನುಂಗುತಿಹೆನು.
(ತಿರುಗಿ ಸೇನೆಯವರ ಗಾನವು ಕೇಳಿಬರುವುದು.)
ಕೇಳಲಾರೆ, ಈ ಘೋಷವನು ಕೇಳಲಾರೆ.
ಸಿಡಿಲೇ, ಈ ಜನರ ನಾಲಗೆಯ ಮೇಲೆರಗು.
ಈ ಬಡವನ ಕಿವಿಯ ಮೇಲೆರಗು.
ನನ್ನ ಕಾಯವನು ಸುಡು, ನನ್ನ ಮನವನು ಸುಡು.

ನನ್ನ ಒಡಲನ್ನೆ ಸುಡು!

(ಸೈನಿಕರು ತಮ್ಮ ಈಟಿಯ ತುದಿಯಿಂದ ಭೂಸುತನನ್ನು, ಮನೆಯ ಒಳಕ್ಕೆ ತಳ್ಳಿ ತೆರಳುವರು. ಕದವು ಮುಚ್ಚಿದ ಶಬ್ದವಾಗುವುದು. ಭೂಸುತನು ಹೆಜ್ಜೆಯಿಡುತ್ತ ಬಂದು ಕುಸಿದುಬೀಳುವನು.)

**ಅನಾಥ:—** ಅಪ್ಪಾ, ಬಂದೆಯಾ?

**ಭೂಸುತ:—** ಅಹುದು ಬಂದೆ.

ಜೀವಚ್ಛವವಾಗಿ ಬಂದೆ.

(ಕಂಠವು ಗದ್ಗದಿತವಾಗುವುದು, ಸ್ವರವು ಉಕ್ಕಿ ಬರುವುದು; ಒಮ್ಮೆಗೆ ಸಿಟ್ಟೇರಿ:)

ದೇವಾ . . . ಈ ಅನ್ಯಾಯಭರಿತ ಸಂಸಾರವನ್ನು ಸುಡು.

## ಅಂಕ ೨

### ದೃಶ್ಯ ೧

(ಒಂದು ಬಯಲುಗಾವಲು. ಕದಳಿಯು ಮರವೊಂದನ್ನು ಇನ್ನೊಂದು ಉನ್ನತ ವೃಕ್ಷವು ರಕ್ಷಿಸಲು ನಿಂತಿದೆ. ಅದರ ಗೆಲ್ಲುಗಳೆಲ್ಲವು ಮುರಿದು ಒಂದು ಟೊಂಗೆ ಮಾತ್ರ ಉಳಿದಿದೆ.)

**ನೇ. :—** ಕಾಯುವವರಾರಿಲ್ಲ ಅನಾಥ ಕದಳಿಯನು
ಇದ್ದೊಂದು ಆಶ್ರಯದ ಅಶ್ವತ್ಥ ಒಂದೊಂದ
ಗೆಲ್ಲ ಕಳಚುತ ತಾನು ಗತಿಹೀನವಾಗಿಹುದು
ಗೈವೆಯೇನೆಲೊ ಕದಳಿ? ಸುಳಿಗಾಳಿ ಬಡಿತಕ್ಕೆ
ನಿನ್ನ ರಕ್ಷಿಪರಾರು? ನೀ ಬಾಳ್ವೆ ಎಂತು?

### ದೃಶ್ಯ ೨

(ಭೂಸುತನ ಮನೆ. ಬಾಗಿಲಿನ ಮೇಲರ್ಧ ತೆರದಿದೆ. ಕೆಳಗಿನ ಸರಳುಗಳ ಎಡೆಯಿಂದ ಒಳಗಿನವರ ಕಾಲು ಮೊದಲಾದುವು ಕಾಣಿಸುವುವು, ಗಂಭೀರ ವಾದ್ಯ.)

**ಭೂಸುತ:—** ಅಳಬೇಡ ಕಂದ, ಅಳಬೇಡ ರನ್ನ

ನನ್ನ ಋಣ ಶೇಷವದು ಪೂರ್ಣ ಸಲುವುದು ಇಂದು.
ನನ್ನ ರಕುತದ ಸಾಲ ನಿಶ್ಚಯಕು ಮುಗಿಯುವುದು.
ಇನ್ನಿಲ್ಲ; ಒಡಲ ಕುಡಿಕೆಯ ನೀರು ಬರಿದಾಯ್ತು.
ನೀನಾದರೂ ಒಬ್ಬ ಕಾಣಿಕೆಯ ಫಲವಾಗಿ
ಬಾಳ್ವೆಯನು ಸವಿಯುತಿರು-ನೋಡಲ್ಲಿ-ನೋಡಲ್ಲಿ
ನನ್ನ ಪಾಲಿನ ಸೂರ್ಯ ಕಡಲೊಳಗೆ ಮುಳುಗುತಿಹೆ.

(ಎಲ್ಲ ನಿಶ್ಶಬ್ದ. ಮಂದಿರವು ಪೂರ್ಣವಾಗಿ ತೆರೆಯುವುದು. ಭೂಸುತನಸ್ತು ಒಯ್ದಾಗಿದೆ. ಭ್ರಾಂತನಂತೆ ಅನಾಥನು ಕೂಗುವನು—ಅಳುವನು....ಆಕಾಶಕ್ಕೆ ಮೋರೆ ಮಾಡಿ)

**ಅನಾಥ:—** ಸಾಸಿರ ನೀರಹನಿಗೊಂದು ಬೆವರಹನಿ,
ಸಾಸಿರ ಬೆವರಹನಿಗೊಂದು ರಕ್ತಹನಿ,
ಸಾಸಿರ ರಕ್ತಹನಿಗೊಂದು ಕಣ್ಣಹನಿ!
ಸ್ವೀಕರಿಸು! ಸ್ವೀಕರಿಸು! ಅದರಲ್ಲಿ
ಈಜು, ಮಿಾಯು, ಮುಣುಗು!

## ದೃಶ್ಯ ೩

(ಕಗ್ಗಲ್ಲು ಮುಳ್ಳುಗಳಿಂದ ಕೂಡಿದ ಹಾದಿ. ಗೀತೆಯೊಡನೆ ಸೈನಿಕರು ಬರುವರು. ಅವರ ಹಿಡಿತಕ್ಕೆ ಸಿಲುಕಿ ಅವರ ಹೆಜ್ಜೆಯನ್ನು ಹಿಂಬಾಲಿಸಲಾರದೆ ಕಾಣಿಕೆಯ ಭಕ್ತರು ಬರುವರು. ಒಬ್ಬನು ನಡೆಯಲಾರದೆ ಬೀಳುವನು. ನಿಳ್ಳಾಗುವುದು. ಘೋಷ ನಿಲ್ಲುವುದು, ಸೇನೆಯವರು ನಿಲ್ಲುವರು.)

**ಸೇನಾಳು:—**(ಬಿದ್ದವನನ್ನು ಎತ್ತಿ, ಏಟುಹಾಕುವನು. ಮುಟ್ಟಿನೋಡುವನು. ಅವನು ಸತ್ತಿರುವನೆಂದು ತಿಳಿದು)

ಹ್ಹ, ಹ್ಹ. ಹಕ್ಕಿ ಹಾರಿತು.

(ಘಂಟೆ ಬಾರಿಸುವುದು)

ಹಾ! ಘಂಟೆ ಬಾರಿಸಿತು—ಇನ್ನಾರು ಬರುವವರು....

(ಸಂಸಾರಿಯೊಬ್ಬನು ಓಡಿಬರುವನು)

ಇನ್ನಾರು—

**ಸಂಸಾರಿ:—** ಚರಣಕೆರಗುವೆ ಒಡೆಯ. ಸತ್ತವನ ಬದಲಿಂಗೆ

ಸಾಯುದಿದ್ದವನಿವನು. 'ಸತ್ತು ಸಾಯುದಿದ್ದವ'.
ದೊರೆಯ ಸೇವೆಯ ಗೈಯ್ಯೆ ಆತುರನು ನಾನಿಹೆನು.
ರಕ್ತಕಾಣಿಕೆಯಿತ್ತು ಬದುಕುವೆನು ನಾನಿನ್ನು;
ಮಡದಿ ಮಕ್ಕಳು ಹಸಿದು ನೊಂದಿಹರು ಬಲುವಾಗಿ;
ದೊರೆಯ ಕೃಪೆಯನುಗಳಿಸಿ ಕಾಯುವೆನು ಅವರನ್ನು

**ಸೇನೆ:—** ದೊರೆಯೆಮ್ಮ, ದೊರೆಯೆಮ್ಮ ಮಹದೇವನೈಯ್ಯ
ನರರಿಂಗೆ ಇಳೆಯೊಳಗೆ ನಿಜ ದೇವನೈಯ್ಯ

(ಅವರನ್ನು ಕರೆದೊಯ್ಯುವರು. ಸತ್ತವನು ಬಿದ್ದಲ್ಲೇ ಉಳಿಯುವನು. ಸೇನೆಯು ಮುಂದುವರಿಯುವುದು.)

## ದೃಶ್ಯ ೪

(ಕತ್ತಲು ಕವಿದಿದೆ. ಗುಡುಗುವುದು)

**ನೇ.—** ಘರ್ಜಿಸಿರಿ, ಘರ್ಜಿಸಿರಿ, ಮೋಡಗಳೆ ಘರ್ಜಿಸಿರಿ,
ವರ್ಷಿಸಿರಿ, ವರ್ಷಿಸಿರಿ, ಈ ಧರೆಯ ಪಾಪವೆಲ್ಲವು
ತೊಳೆವಂತೆ ವರ್ಷಿಸಿರಿ, ಘೋರ್ಗರೆದು ಬನ್ನಿರಿ
ದುಷ್ಟರನು ದಂಡಿಸಲು ಆಗದಿದ್ದರೆ ನಿಮಗೆ
ದೀನರನು ದಂಡಿಸಿರಿ. ಹಾಳು ದೀನರ ಕುಲವ
ಸುಡುಬೂದಿ ಗೈಯ್ಯುತಲಿ ಹೆಣೆಯ ಮೇಲೇರಿಸಿರಿ.
ಕೇಳಲಾರದು ಅವರ ಒಡಲ ಕಿರುದನಿ ಜಗಕೆ
ಸಹಿಸಲಾರೆನು ಅವರ ನಿಡಿದುಸಿರ ಸುಳಿಗಾಳಿ.
ಪ್ರಾಣವನು ಎಳೆದೆಳೆದು ತಿನ್ನದಿರಿ! ಬಲುಪಾಪ.

(ಮೋಡಗಳು ಮೇಲೆ ಸರಿಯುವುವು. ಕೆಳಗಡೆಯಿಂದ ಕಳೇಬರ ವೊಂದು ಕುಣಿಯುತ್ತ ಬರುವುದು)

**ಕಳೇಬರ:—**ಯಾರವರು—ಗುಡುಗುವೋಡಗಳನ್ನು ಕರೆವವರು?
ವೊರೆಯಿಡುವ ಜನರಿವರು—ದಾಸರಲ್ಲವೆ ಅವರು!
ವೊರೆಯೇಕೆ? ಅಳುವೇಕೆ? ಹೀನತರ ನುಡಿಯೇಕೆ?
ನಗಬಾರದೇನೆಲ್ಲ! ನಗಬಾರದೇನಪ್ಪ!

ಒಂದು ನಗು, ಒಂದು ನಗು;....ಒಂದೊಂದೆ ನಗು....

(ಕಳೇಬರವು ಸರಿದು ಮುದುಕಳಿಸುವ ನಗುವು ಮಾತ್ರ ಕೇಳಿಸುವುದು.)

## ದೃಶ್ಯ ೫

ದೇವಿಯ ಗುಡಿ. ಅದರ ಬಾಗಿಲು ಮುಚ್ಚಿದೆ. ಕತ್ತಲು ಕವಿದಿದೆ. ಘಂಟೆ ಜಾಗಟೆಗಳು ಬಾರಿಸುವುವು. ಕೊನೆಯ ಘಂಟೆಯಾಗುವುದು. ಬಾಗಿಲು ತೆರೆದು ದೊರೆಯು ದೇವಿಯ ಪಾದಗಳಿಗೆರಗುತ್ತಿರುವನು. ಪಾತ್ರೆಯನ್ನು ಏರಾಗಿ ಹಿಡಿಯುವನು.

ಮೂರು ಬಾರಿ ಶಂಖಧ್ವನಿಯಾಗುವುದು. ರಾಣಿಯೂ ಯುವರಾಜನೂ ಅಲ್ಲಿಗೆ ಬರುವರು. ಹಿಂದಿನಂತೆ ನಮಿಸಿ ರಕ್ತಕಾಣಿಕೆಯನ್ನು ಸ್ವೀಕರಿಸುವರು. ಉನ್ಮತ್ತ ನೃತ್ಯವು ವಾದ್ಯ ಸಂಗೀತದೊಡನೆ ತೊಡಗುವುದು.

# ಅಂಕ. ೪

## ದೃಶ್ಯ ೧

(ಬಯಲುಗಾವಲು. ಕದಳಿಯ ಗಿಡ ಒಂದೇ ನಿಂತಿದೆ. ಬಳಿಯ ಅಶ್ವತ್ಥ ವೃಕ್ಷ ಪೂರ್ಣ ಮುರಿದಿದೆ.)

**ನೇ:—** ಚಂಡಮಾರುತ ನಿನ್ನ ಲೀಲೆಯದು ಮುಗಿಯಿತೆ!
ಇದ್ದೊಂದು ಆಸರೆಯ ಮುರಿದು ಕೆಡವಿದು ಆಯ್ತು.
ಕದಳಿಯೊಂದನು ಬಿಟ್ಟೆ! ನಗುತ ಕೊಲ್ಲಲು ಏನೊ?

## ದೃಶ್ಯ ೨

(ಆನೊಂದು ಬಯಲುಗಾವಲು. ಯುವರಾಜನ ಬೇಟೆಯ ಪಡೆ ಬರುವುದು. ಉಲ್ಲಾಸಕಾರಿ ಗಾನವಾಗುವುದು.)

**ಯುವರಾಜನ ಜನರು:—**

ದರ್ಪಣಾ, ದರ್ಪಣಾ, ರಾಜಕುಮಾರ
ದರ್ಪಣನೆಂಬುವನು ಜಗದೇಕ ವೀರ

ದರ್ಪಣನಿಹೆನ್ನೈಯ್ಯ ಜೀಟೆಯೊಳು ಶೂರ
ದರ್ಪಣ ತಾನವನು ನರಕುಲಕೆ ಹಾರ!
(ಪ್ರವೇಶಿಸಿ ಮುಂದೆ ಸರಿಯುವರು)

**ದೃಶ್ಯ ೩**

(ಚಿತೆಯೊಂದರ ಬಳಿಯಲ್ಲಿ ಅನಾಥನಿರುವನು. ತನ್ನ ತಂದೆಯನ್ನು ಕಿಚ್ಚು ನುಂಗುವುದನ್ನು ನೋಡುತಿದ್ದಾನೆ.)

**ಅನಾಥ:—** ಚಿಂತೆಯಾ ಕಿಚ್ಚಿನ್ನ ಒಯ್ಯುತಿಹ ಮುನ್ನ
ಸಂಕಟದ ಬಾಳ್ವೆಯಿದು ಮುಗಿಯುವಾ ಮುನ್ನ
ಭೂದೇವನೀ ಹಬ್ಬ ಓರಿಯುತಿಹ ಮುನ್ನ
ದಹಿಸು ಕಾಯವು ಇದನು—ಬಿಡಬೇಡ ಎನ್ನ.
ಅಪ್ಪನಾ ಕಾಯವನು ನುಂಗುತಿಹೆ ನೀನು
ರಕ್ತವನು ಸುರಿಯುತ್ತೆ ಸತ್ತಿಹೆನು ತಾನು
ಆ ಶಕ್ತಿ ಎನಗಿಲ್ಲ; ಬದುಕೆನ್ನೈ ನಾನು
ಒಯ್ಯೆನ್ನ, ಒಯ್ಯೆನ್ನ, ತ್ವರೆಯಿಂದ ನೀನು
(ರಾಜಕುವರನು ಬಂದು ಕಿಚ್ಚು ನೋಡಿ ನಿಂತುಬಿಡುವನು.)

**ದರ್ಪಣ:—** ಯಾರಿವನು? ಬಲು ರಸಿಕ! ಬೆಳಕು ಹರಿಯುವ ಮುನ್ನ
ಸೊಗಸ ಕಿಚ್ಚಿನ ಪೊದೆಯು, ಸಾಕಿ ಬೆಳೆಯುವ ಹೂವ.
ಬಲುವೆ ಸೊಗಸಿನ ಬೆಂಕಿ! ಹಾರಿ ಕುಣಿಯುತಲಿಹುದು!
ಯಾರಿವನು? ಯಾರಿವನು? ತಿಳಿಯಲಪ್ಪುದು ಮನವು!
ನನ್ನವಯಸಿವಗಿಹುದು. ನನ್ನ ಸಮಕಾಯಸಿನ
ನನ್ನ ಮನವನು ರಮಿಪ ಗೆಳೆಯನಿವನಾಪನೆ?
ಅರಮನೆಯ ಪಂಜರದಿ ಸರಿಸಾಟಿಗಳ ಕಳೆದು
ಎಷ್ಟು ಸುಖವನು ತಾನು ಉಂಡು ತಿಂದರೆ ಏನು?
ಒಡಲಿಂಗೆ ಒಡಲಿತ್ತು ಮಾತು ಬೆರೆಸುವರಿಲ್ಲ.
ಬೆರಳಿಂಗೆ ಬೆರಳಿತ್ತು ಆಡ ಬರುವವರಿಲ್ಲ.
ಏರುತಗ್ಗಿನ ಜನರು, ಸಾರಿಸರಿಯುವ ಜನರು
ಬಗ್ಗಿಕುಗ್ಗುವ ಜನರು— ನನ್ನಂತೆ ನಿಲ್ಲದರು.

ಬಾ ಗೆಳೆಯ, ಬಾ ಬಳಿಗೆ, ನಿನ್ನ ಸೇರುವ ಮನವು
ಎನ್ನ ಒಡಲೊಳು ಉದಿಸಿ ಕಾಡುತಿದೆ ಬಲುವಾಗಿ.
ಒಂಟಿತನ ಕಳೆಯಲ್ಕೆ ಕಿಚ್ಚು ಮೆಚ್ಚುವ ಬದಲು
ಒಂಟಿಯಾಗಿರುತಿಹೆನ ಕೂಡ್ಯಾಡ ಬಾರಯ್ಯ.
ಆ ಬೆಂಕಿ ಕೊಡುವ ಸುಖ, ಮೀರಿ ಉಕ್ಕುವ ಸುಖವ
ಸಖ್ಯವೆನ್ನದು ನಿನಗೆ ನೀಡುವುದು—ನಿಶ್ಚಯವು.

**ಅನಾಥ:—** ನಗುತಿಹುದು ಜಗವಿದುವು!
ಒಡಲು ಒಡೆಯುತಿರಲು,
ಭೂಗರ್ಭ ಬೇಯುತಿರೆ,
ಕಡಲು ಉಕ್ಕುವ ತೆರದಿ
ನಗುತಿಹುದು ಜಗವಿದುವು!
ನನ್ನ ಕಾಡುವ ಕಿಚ್ಚು
ಪಿತನ ಸುಡುತಿಹ ಕಿಚ್ಚು
ತರುಣನಿವನೀತಂಗೆ
ಕಾಡ ಹೂವಾಗಿಹುದು!

ನಡಿ ತರುಣ, ನಡಿ ಹೊರಗೆ, ಮಸಣದಲಿ ಮಲಗಿರುವ
ಪತಿಯ ವರುಶನ ಕೊಳ್ಳೆ ಮಡದಿಯೊಬ್ಬಳು ಬರಲು
ಸರಸ ನುಡಿಯುವ ಒಡಲು—ಅದರೊಳಗೆ ಏನಿಹುದೋ?
ಕಲ್ಲಿಹುದೊ, ಕಿಚ್ಚಿಹುದೊ, ಕಾಳಕೂಟವೆ ಇಹುದೊ?

(ವಿಸ್ಮಿತನಾದ ರಾಜಕುಮಾರನು)

**ದರ್ಪಣ:—** ಕ್ಷಮಿಸೆನ್ನ. ನಿನ್ನ ಮನದಳಲದನು ಅರಿಯದಿಹೆ.
ಮನ್ನಿಸುತೆ ನಿನ್ನ ಪರಿಚಿತಿ ಈವುದೆನಗೆಂದೆ.
ಉರಿವ ಬೆಂಕಿಯ ಮುಂದೆ ಆಡುತಿಹೆ ಏಕಯ್ಯ?
ಅರಿಯದೆನೆ ಕೇಳುತಿಹೆ, ಉತ್ತರಿಸು ಹೇ ಗೆಳೆಯ

**ಅನಾಥ:—** ಇದು ಕಿಚ್ಚು, ಇದು ಕಿಚ್ಚು, ಆಡುವಾ ಕಿಚ್ಚಲ್ಲ
ನೋಡಲ್ಲಿ: ಅಪ್ಪನನು ಸುಡುಸುಡುತೆ ನುಂಗುತಿಹ
ಕಿಚ್ಚು; ಮಸಣದಾ ಕಿಚ್ಚು. ಸುಖವ ನುಂಗಿದ ಕಿಚ್ಚು.

**ದರ್ಪಣ**:— ವಯಸಾಯಿತೇನವಗೆ? ಮುಪ್ಪಿನವನೆ?
**ಅನಾಥ**:— ನಾಲ್ವತ್ತು ವತ್ಸರಕೆ ಮೀರಿಹೆನು ಎರಡು ದಿನ
**ದರ್ಪಣ**:— ಇನ್ನೇನು! ಮಾರಿಬೇನೆಯು ಬಂತೊ ಅವಗೆ.
**ಅನಾಥ**:— ತನ್ನ ಮಾರಿದ ಬೇನೆ, ಕೊಂಡೊಯ್ದಿತವನ
**ದರ್ಪಣ**:— ಪೇಳು ಗೆಳೆಯನೆ ಪೇಳು, ಗೂಢವಿದ ಬಿಡಿಸಿ
**ಅನಾಥ**:— ಗೂಢವಿಲ್ಲವು ಇದಕೆ. ಗೂಡು ಬಿಟ್ಟಿತು ಪ್ರಾಣ
ರಕ್ತ ಕಾಣಿಕೆಯಿತ್ತು, ಧನಿರಾಯಗಾಗಿ.
**ದರ್ಪಣ**:— ರಕ್ತ ಕಾಣಿಕೆಯೇನು? ಯಾರವನು ಕಲಿ ಪುರುಷ?
ನನ್ನ ಬಾಳ್ವಿಯು ಜಗದಿ ಎಂಥ ಅನ್ಯಾಯುವಿದು?
ಯಾರವನು ಪೇಳಯ್ಯ. ಆಣೆ ಮಾಡುತೆ ನುಡಿವೆ;
ಕ್ರೂರಕತ್ತಿಯ ಮೊನೆಗೆ ಅವನ ನಾ ಬಲಿಯೀವೆ.
**ಅನಾಥ**:— ಯಾರೆಂದು ನಾನರಿಯೆ! ಕರೆಸು ಒಯ್ದರು ಅವನ;
ಒಡಲ ರಕುತವ ಬಸಿದು, ಗೂಡ ಬಿಟ್ಟರು ಬಳಿಕ.
ಎನ್ನ ಒಯ್ಯಲು ಇನ್ನು ಬರುವೆನೆಂದಿಹರಯ್ಯ
ಎನ್ನ ಕಾಯುವು ಇನ್ನು ಪರರ ಉಣಿಸಿನ ಪಣ್ಣು.
**ದರ್ಪಣ**:— ಯಾರೆಂದು ತೋರುವೆಯ? ಆಣೆಮಾಡುತೆ ನುಡಿವೆ
ಹಾರಿ ಕೊಲ್ಲುವೆನವನ. ನುಡಿಯಿದುವು ನಿಜವೇನು?
**ಅನಾಥ**:— ಸಟಿಯಾಡುವನೆ ಇವನು ಗತಿಯಿಲ್ಲದಿಹ ಬಾಲ?
ದಿಟ ಮಿತ್ರ, ಬಾ ಜತೆಗೆ, ತಿಳಿಯುವುದು ಬಳಿಕೆಲ್ಲ.
[ಇಬ್ಬರೂ ತಬ್ಬಿಕೊಂಡು ತೆರಳುವರು.]

## ಅಂಕ ೫

### ದೃಶ್ಯ ೧

[ಅನಾಥನ ಮನೆಯ ಕದವು ಹಾಕಿರುವುದು. ಒಳಗೆ ಕೇಳಿಸುತ್ತಿದೆ ಮನೆಯವರ ದನಿ; ಸೇನೆಯ ಗಾನವಾಗುವುದು.]

**ದರ್ಪಣ**:— ಬಾ ಗೆಳೆಯ, ಅವರ ಒಡಲನು ಬಸಿವೆ
ಅವರ ನೆತ್ತರು ಬಸಿದು ಪಿಶಾಚಿಗಳಿಗೀವೆ?

**ಅನಾಥ:**— ನೀರು ಕಡಿಯುವ ಬದಲು ರಿಂಜೆ ಕಡಿಯುವೆಯ

. . . . . . .

ಅಯ್ಯೋ ನಡುಗುತಿದೆ ಈ ಒಡಲು
ಅವರ ಹೆಜ್ಜೆಯ ದನಿಯು
ಎದೆಯ ಮೇಲಾಡುತಿದೆ.
ರಕ್ತ ಕಾಣಿಕೆಯಂತೆ! ಪ್ರಾಣ ಕಾಣಿಕೆ ಲೇಸು.

[ಕದವು ತೆರೆಯುವುದು. ಸಿಪಾಯಿಗಳ ಪ್ರವೇಶ. ಮಂಚದ ಕೆಳಗೆ ಅಡಗಿ ದರ್ಪಣನು ಮಲಗಿಕೊಂಡಿರುವನು.]

**ಸೇನಾಳು:**— ಹೊಸ ಕಾಣಿಕೆಯು ಭಾಗ್ಯ! ತರುಣ ನೀ ಧನ್ಯ!

**ಅನಾಥ:**— ಮಾತಾಡದಿರಿ! ಏನೊಂದು ಆಡದಿರಿ
ಕ್ರೂರನುಡಿಗಳನೆಸೆವ ಕೆಟ್ಟ ನಾಲಗೆ ಇದುವು
ಕಳಚಿ ಬೀಳುವ ದಿನವು ದೂರಿಲ್ಲ ದೂರಿಲ್ಲ.

[ಸೇನೆಯುವರು ಅವನನ್ನು ದಂಡಿಸಿ ಒಯ್ಯುವರು. ಅವರು ತೆರಳಿದ ಬಳಿಕ ದರ್ಪಣನು ಅವಸರದಿಂದ ಅವರನ್ನು ಹಿಂಬಾಲಿಸಿ ಓಡುವನು.]

## ದೃಶ್ಯ ೨

[ಕತ್ತಲು ಗುಡಿಯ ಒಳಗೆ ನಾನಾ ತೆರನ ವಾದ್ಯನಿನಾದಗಳಾಗುವುವು.]

**ಸೇನೆ:**— [ತೆರೆಯಲ್ಲಿ]
ಭೂದೇವ ಕೋಪಿಸುವ—ತ್ವರೆಮಾಡಿ!

[ಗುಡಿಯ ಬಾಗಿಲು ತೆರೆಯುವುದು. ದೊರೆಯು ನಿಂದಿಹನು. ಕೈಯಲ್ಲಿ ಪಾತ್ರೆಯಿದೆ. ಶಂಖವಾಗುವುದು.]

**ಸೇನೆ:**— [ಹಾಡುತ್ತ ಪ್ರವೇಶ]

**ಭೂದೇವ:**— ವೇಳೆಯೇಸಿದು ಇಂದು?
ಭವದೇವಿ ಶಾಪ ಪಡೆದಿರಿ ನೀವು.

**ಸೇನಾಳು:**— [ನಡುಗುತ್ತ] ಜೀಯ, ತರುಣನಿವನೊಬ್ಬನೇ
ಕಾಟವನು ನಮಗಿತ್ತು, ತಡೆಗೈದನೆಲ್ಲವನು.

**ಭೂದೇವ:**— ಮರುಳು! ರಾಜಾಜ್ಞೆಯನು ಮುರಿವನಿವನೇ?

ಮೊದಲ ಕಾಣಿಕೆಯನ್ನು ಕೇಳಿರುವನಿಂದ.

[ವಾದ್ಯನಿನಾದವಾಗುವುದು. ರಕ್ತಕಾಣಿಕೆಯನ್ನು ಸ್ವೀಕರಿಸುವರು.]

(ಎಲ್ಲ ಶಾಂತವಾಗುವುದು. ಜನರು ಹಿಂದಕ್ಕೆ ಸರಿಯುವರು. ರಾಜನು ರಕ್ತದ ಬಟ್ಟಲನ್ನು ಕೈಯಲ್ಲಿ ಹಿಡಿದು ದೇವಿಯ ಬಳಿಗೋಡುವನು.)

**ದರ್ಪಣ:—** [ಆವೇಶದಿಂದ ಧಾವಿಸಿಬರುವನು.]

ಏನಿದುವು? ಎಲ್ಲಿಂದ ಪಡೆದೆ ಇದ?

**ಭೂದೇವ:—** ನಾ ಧನ್ಯ, ನಾ ಧನ್ಯ!

ಇಂದು ಕೇಳಿಹೆ ನೀನು—'ಎಲ್ಲಿಂದ ಬಂತೆ'ಂದು.

ಅಂತರಲು ಗೂಢವನರಿಯೆ ಪ್ರಾಪ್ತವಯಸ್ಕನು ನೀನು.

ಪೇಳುವೆನು ಬಳಿಕೆಲ್ಲ. ಮೊದಲು,ಅವ್ಯತವಿದ ಸೇವಿಸು ಕಂದ.

**ದರ್ಪಣ:—** [ಉನ್ಮತ್ತ ನಗೆಯನ್ನು ನಗುತ್ತ] ಪೇಳುವೆಯ! ಪೇಳುವೆಯ!

ನಾನೆ ಪೇಳುವೆ ನಿನಗೆ—

**ಭೂದೇವ:—** ಅರಿತಾಯಿತೆ? ಇಷ್ಟರಲಿ, ಅರಿತಾಯಿತೆ!

**ದರ್ಪಣ:—** [ಆ ಪಾತ್ರೆಯನ್ನು ಹಿಡಿದು. ಕೈಯಲ್ಲಿ ಕಠಾರಿಯೊಂದನ್ನು ಹಿಡಿದು.]

ನೋಡಿಲ್ಲಿ, ಇಂತು ಹಿಡಿಯುತೆ ಪಾತ್ರೆ

ಇಂತು ಹಿಡಿಯುತೆ ಕತ್ತಿ

ಇಂತು ಬಸಿದಿಹೆ ಒಡಲ!

[ಎಂದು ತಂದೆಯ ಎದೆಯನ್ನಿರಿದು ರಕ್ತವನ್ನು ಪಾತ್ರೆಯಲ್ಲಿ ಬಸಿದು, ದೇವಿಯ ಕಡೆಗೋಡುವನು.]

ಕುಡಿದೇವಿ! ಕುಡಿಯಿದನು—

ನೆತ್ತರಿನ ಕಾಣಿಕೆಯು. ಧೈರ್ಯವಿದ್ದೊಡೆ ಕುಡಿಯೆ.

[ವಿಗ್ರಹವು ತನ್ನಂತೆ ಮುರಿದುಬೀಳುವುದು.]



# ಪಾತ್ರ ಪರಿಚಯ

ಇಲ್ಲಿ ಬರುವ ಪಾತ್ರವರ್ಗಗಳಲ್ಲಿ ನಾಲ್ಕು ಗುಂಪುಗಳಿವೆ. ಇಸ್ಪಿಟು, ಕಳವರ, ಡೈಮನ್, ಆಟೀನು—ಇವುಗಳ ವಿವಿಧ ಎಲೆಗಳೇ ಪಾತ್ರಗಳ ರೂಪಗಳಲ್ಲಿ ಬರುತ್ತವೆ. ಈ ನಾಲ್ಕು ಗುಂಪು, ನಾಲ್ಕು ಜಾತಿ.

ಸಾಂಕೇತಿಕವಾಗಿ ಇವು ನಮ್ಮಲ್ಲಿನ ನಾಲ್ಕು ವರ್ಣಬೇಧಗಳನ್ನು ಸೂಚಿಸುತ್ತವೆ.

**ಡೈಮನ ಕುಲ:—** ಬ್ರಾಹ್ಮಣ ಕುಲ

**ಆಟೀನು ಕುಲ:—** ಕ್ಷತ್ರಿಯ ಕುಲ

**ಕಳವರ ಕುಲ:—** ವೈಶ್ಯ ಕುಲ

**ಇಸ್ಪಿಟು ಕುಲ:—** ಶೂದ್ರ ಕುಲ

ಈ ಕುಲದಲ್ಲಿ ಗುಲಾಮರೂ ಇರುತ್ತಾರೆ. ನಾಟಕದಲ್ಲಿ ಡೈಮನ್ ಕುವರಿಯು ಮಾತ್ರ, ಇಸ್ಪೀಟಿನಲ್ಲಿರದ ಗುರುತು. ಅದಕ್ಕೆ 'ಜೋಕರ್' ಸ್ಥಾನವೆಂದರೂ ಸರಿಯೆ. ಅಂತು ಈ ಎಲ್ಲ ಪಾತ್ರಗಳು ವರ್ಣಭೇಧದ ಪ್ರಶ್ನೆಯ ವಿಡಂಬನೆಗಾಗಿ ಇಲ್ಲಿ ಉಪಯೋಗಿಸಲ್ಪಟ್ಟಿವೆ.



## ಮೊದಲನೆಯ ಅಂಕ

[ಇಸ್ಪಿಟು ಎಕ್ಕನು ಉಳಿದ ೨ರಿಂದ ೧೦ರ ವರೆಗಿನವರೂ ರಂಗ ಮಂಟಪ ದಲ್ಲಿ ಆತ್ಮ ಪ್ರಶಂಸೆ ಮಾಡಿಕೊಳ್ಳುತ್ತ ಪ್ರವೇಶಿಸುವನು]

**ಇಸ್ಪಿಟು ಎಕ್ಕ:**—ಒಂದು, ಎರಡು, ಮೂರು, ನಾಲ್ಕು ಹೀಗೆಲ್ಲ
ಉಂಟು, ನಮ್ಮ ಜಗತ್ತು.
ಅಂಕೆ ಎಂಬುದೆ ನಮ್ಮ ಹೆಸರು, ಅಂಕೆಯೆಂಬುದೆ
ಮುತ್ತು.
ಅಂಕೆ ಇದ್ದಾಗ ಎಲ್ಲಾ ಇತ್ತು, ಅಂಕೆ ಬಿದ್ದರೆ
ಎಲ್ಲಾ ಬಿತ್ತು.

**ಇ. ೧೦:**— ಅದರೊಳಗಂತು ಹತ್ತು ಮಹತ್ತು.

**ಇ. ಎ:**— ಎಕ್ಕ ಹೆಚ್ಚು

**ಇ. ೨:**— ನಾವ್ಯಾರೂ ಇಲ್ಲದೆ ಹೋಗದು ಹೊತ್ತು.

**ಇ. ೧೦:**— ಅಂಕೆಯಿಲ್ಲದೆ ಏನೂ ಸಾಗದು.

**ಇ. ಎ:**— ರೆಂಕೆಯಿಲ್ಲದೆ ಹಕ್ಕಿ ಹಾರದು
ಇನ್ನೊಂದುಂಟು ಬುದ್ಧಿವಾದ:
ನಿಮ್ಮಲ್ಲೆಷ್ಟೋ ಮಂದಿ, ದೂಮ, ದೊಟ್ಯ ಎಂದು
ಬೇರೆ ಬೇರೆ ನಾಮ ಇರಿಸಲೇನು ಚಂದ?
ನಿಮಗೂ ಇರಲಿ ಅಂಕೆ;
ಅಂಕೆ ಮೀರಿದ ಜಗತ್ತು ಉಂಟೆ?

(ಆಗ ಕಳವರ ಎಕ್ಕನು ಬರುವನು)

**ಕ. ಎಕ್ಕ:**—ಇಸ್ಪಿಟು ಅಂಕೆ ನೋಡಿ, ಮೋಸ ಹೋಗಬೇಡಿ.
ಅಂಕೆಯೇನೋ ಮುಖ್ಯ, ಅದುವೆ ಬರಿಯ ಸತ್ಯ,
ಇಸ್ಪಿಟು ಅಂಕೆ ಮೋಸ—ಕಳವರ ಅಂಕೆ ಭೇಷ.
ಇಸ್ಪಿಟು ಜಾತಿ, ಶೂದ್ರ; ಹಾರೆ ಮುಸುಡಿನ ಗೃಧ್ರ
ಜಾತಿ ಜಾತಿ ನಾನು—ವೈಶ್ಯ ಕಾಮಧೇನು
ಬ್ರಾಹ್ಮಣಗುಂಟು ಜನಿವಾರ,

ಕ್ಷತ್ರಿಯಗುಂಟು ತಳವಾರ,
ನನ್ನಲ್ಲಿಹೆನು ಚಿನಿವಾರ
ಅದಕೇ ಕರೆವರು—ಕಳವಾರ.

(ಆಟೀನು ಎಕ್ಕನು ಅವನನ್ನು ಇದಿರಾಗುವನು)

**ಆ. ಎ:—** ಯಾರವರಯ್ಯ—ಹಲುಬುವುದಿಲ್ಲಿ?
ಕೋಮಟಿ ಕಳವರ! ಬಾಯಲಿ ಬಡಿವಾರ,
ವಾರದಿ ಹೇಸು ಶನಿವಾರ, ಜಾತಿಲಿ ಹೇಸು ಕಳವಾರ.
ಜಾತಿಯೊಳ್ ಹಿರಿಯ ಆಟೀನು, ಕತ್ತಲೆಗೆಂತೊ ಲಾಟೀನು.
ತುಂಬು ರಕುತದ ಎದೆ—ಎದುರಿಗೆ ಬಂದರೆ, ಒದೆ!
ಆಟೀನೊಂದೆ ಸತ್ಯ, ಮಿಕ್ಕವರೆಲ್ಲರು ಹೆತ್ಯ.

**ಕ. ಎ:—** ಆಟೀನಣ್ಣಾ, ಸಿಟ್ಟೇಕಿಷ್ಟು? ಅಂದೆ ನಾನು ಏನು?
ಇಸ್ಪಿಟು ಕೇಳು; ಕಳವರ ಮೇಲು . . .

**ಆ. ಎ:—** ಆಟೀನು ಮುಂದೆ ಸರ್ವರ ಸೋಲು.
ಹೃದಯವೆ ನನ್ನದು.
ಮೂರು ಉಂಡೆಗೆ—ಗೂಟ ನಿಮ್ಮದು,
ಯಾತ್ರೆಗೆ ಮಕ್ಕ
ಬಿಟ್ಟರೆ ಸಿಕ್ಕ
ಶೌರ್ಯಕೆ ಪಕ್ಕ
ಆಟಿನು ಎಕ್ಕ—!

(ಇಸ್ಪಿಟು ಎಕ್ಕ ಈಗಷ್ಟೆ ಹಿಂದಕ್ಕೆ ಸರಿದವನು ತುಸು ಧೈರ್ಯದಿಂದ ಮುಂದಕ್ಕೆ ಬರುವನು.)

**ಇ. ಎ:—** ನಾನೂ ಕೇಳಿಪೆ ಎಲ್ಲವ ಚೊಕ್ಕ.
ಆಟೀನಣ್ಣನ ಮಾತು ಕೇಳಿ, ಕಳವರ ಅಣ್ಣ ತಣ್ಣ.
ಯಾಸ್ಪೀಟು ಶಾಸ್ತ್ರವ ಓದಲು ಮುಖ್ಯ,
ಇಸ್ಪಿಟು ಕಾಸನು ಗಳಿಸಲು ಮುಖ್ಯ.

**ಆ. ಎ:—** ಆಟಿನು ಎಕ್ಕವ ಮರೆತೆಯೋ ಏನು?
ಲೋಕಕೆ ಲಾಟಿನು ಎಂದೆನು ನಾನು.

ಇ. ಎ:— ಇರುಳಿಗೆ ನೀನು! ಹಗಲಿಗೆ ನಾನು....

ಆ. ಎ:— 'ಇರುಳಿಗೆ ನೀನು'?

ಇ. ಎ:— ಲಾಟನು ಅಂದೆ ನೀನು, ಇರುಳಿಗಲ್ಲವೇನು?
ಹಾರೆ ರೂಪದ ನಾನು ಹಗಲಿಗಲ್ಲವೆ ಏನು.

ಆ. ಎ:— ಹೊಲೆಯ ನೀನು, ಶೂದ್ರ ನೀನು,
ನೋಟಕೆ ಇರುವಿ 'ಎಲೆ'; ಊಟಕ್ಕಿಲ್ಲದೆ ಅಲೆ.

ಇ. ಎ:— ಶ್ರೇಷ್ಟರು ನೀವು, ಹಿರಿಯರು ನೀವು.
ಕಾದಿದರೆಂಬರು 'ಎದೆ'; ಇಲ್ಲದೆ ಹೋದರೆ ಒದೆ.

(ಡೈಮನ್ ಎಕ್ಕಾನ ಆಗಮನ. ಉಳಿದವರೆಲರೂ ಸ್ತಬ್ಧರಾಗುವರು)

ಡೈ. ಎ:— ಚತುರ್ಮುಖ ಬೊಮ್ಮನ ಮೊಮ್ಮಗ ಡೈಮನ
ಡೈಮನ ಕುಲವೇ ಬೊಮ್ಮನ ಕುಲವು.
ಗೋತ್ರ ನಮಗೆ ಹತ್ತು; ಸೂತ್ರ ಮಾತ್ರ ಮಸ್ತು.
ರಾಣಿ ರಾಜ ನಮಗೂ ಉಂಟು; ಹೆಚ್ಚಿನದೊಂದು
ಮಗಳೂ ಉಂಟು.
ಅಂಕೆ ಹತ್ತೂ ನಮ್ಮಲಿ ಉಂಟು—
ಅದರಲ್ಲಾರು ಶ್ರೇಷ್ಟ? ಹೇಳಲು ನನಗೇನ್ ನಷ್ಟ?
ಶ್ರೇಷ್ಟ ನಾನು—ಡೈಮನು ಎಕ್ಕ. ಉಳಿದುವು ಭರತಿ ಲೆಕ್ಕ.
ಲೆಕ್ಕಕೆ ಸುಲಭ ಅದ್ವೈತ—ನಾನೇ ಎಂದರೆ ಮುಗೀತ?
'ದ್ವೈತ'ಎಂದರೆ ಬಂತು, ಒಂದು, ಎರಡು, ಎಂಟು, ಹತ್ತು!
ಎಕ್ಕದ ಹಿರಿಮೆ ಹೇಳಿ, ಚುಟುಕಿಂ ಮುಗಿಸುವೆ ತಾಳಿ.
ಎಕ್ಕ ಹೆಂಡತಿ ಇದ್ದರೆ ಸಿಕ್ಕ್ಯಾಂಗೆ ಬೈದರು ಮಾಫಿ.
ದುಪ್ಪಟು ಹೆಂಡತಿ ಆದರೆ ಗಂಡಗೆ ಸಿಗದು ಕಾಫಿ.
ಇನ್ನು, ಮೂರು ನಾಲ್ಕು ಹೆಂಡರಿದ್ರೆ ಆಗೇ ಹೋತು.
ಗಂಡ ಸತ್ತನೆ, ಮದುವೆ ಗಳಿಗೆಗೆ, ಕ್ಷಣಕ್ ಹತ್ತು ಕೈಪೇತು.
ನೋಡಿ—ಅಂಥಾ ಎಂಥಾ ರಾವಣ.
ಕೆಟ್ಟುದು ಹೇಗೆ ಗೊತ್ತೇ? ಇಬ್ಬರು ಹೆಂಡಿರ ಬಯಸಿ.
ಸೋತುದು ಹೇಗೆ ಗೊತ್ತೇ? ಮೂವರು ಜನರಾಗಿ ಜನಿಸಿ.
ಸತ್ತುದು ಹೇಗೆ ಗೊತ್ತೆ?—ರಾಮನ ಬಾಣಕ್ಕಲ್ಲ

ಹತ್ತು ತಲೆಗಳ ಹೊತ್ತು ದಣಿದು ಶರೀರ ಬಿತ್ತು.
ಹೆಣದ ಮೇಲೆ ಬಿತ್ತು—ರಾಮನ ಬಾಣದ ಕುತ್ತು.
ಡೈಮನ ಪುರಾಣ ಉದ್ದ ಆಯ್ತೆ? ಹಾಗಾದರೆನ್ನುವೆ ಇಷ್ಟು:
ಜಾತಿಯಲ್ಲಿ ಡೈಮನು ಮುಖ್ಯ, ವ್ಯಕ್ತಿಯಲ್ಲಿ ಎಕ್ಕ ಮುಖ್ಯ.
ಬ್ರಾಹ್ಮಣ ನಾನು ಬೊಮ್ಮನ ಮಗನು
ಕುಲವನು ಕರೆವರು ನಿಜ ಡೈಮನು,

**ಇ. ಎ:—** (ಅವನ ಮಾತನ್ನು ಕೇಳಿ)
ಏನೋ ಅಂದಿರಿ ಮಂತ್ರವನೊಂದ
ಅರ್ಥವೆ ಆಗದು ಅದೇನೆಂದು.

**ಕೆ. ಎ:—** ಡೈಮನು ಮಂತ್ರವ ಕೇಳಲು ಸಲ್ಲ,
ಇಸ್ಪಿಟು ತಂತ್ರವ ಬಲ್ಲವರಿಲ್ಲ.

**ಡೈ. ಎ:—** ಮಂತ್ರಕೆ ಸುಲಭದ ಅರ್ಥವೆ ಇಲ್ಲ.

**ಆ. ಎ:—** ಮಂತ್ರಕೆ ಅರ್ಥವು ಆದುದೆ ಇಲ್ಲ.

**ಕೆ. ಎ:—** ಮಂತ್ರಕೆ 'ಅರ್ಥ' ಪ್ರತಿಫಲವಲ್ಲ?

**ಇ. ಎ:—** ಮಂತ್ರಕೆ ಅರ್ಥ ಉಂಟೋ ಇಲ್ಲ?

**ಡೈ. ಎ:—** ಮಂತ್ರಕೆ ಅರ್ಥ ಇಲ್ಲದೆ ಉಂಟೇ?
ಅರ್ಥಕೆ ಮೀರಿದ ಮಂತ್ರವು ಉಂಟು,
ಡೈಮನ್ ಇದ್ದರೆ ಅರ್ಥವು ಉಂಟು—
ಮಂತ್ರ ಎಂದರೆ ಬ್ರಹ್ಮನ ಗಂಟು
ಕೆಲಕೆಲ ಮಂತ್ರ ಬ್ರಹ್ಮಗೇ ಗಂಟು
ನಾವೇ ಬಿಡಿಸಿ ಕೊಡಲವಗುಂಟು
ಅವರಿಂದಲ್ಲವೆ ಶಾಸ್ತ್ರದ ಮಾತು;
"ಬೊಮ್ಮನ ಪೂಜೆಯು ದೊಡ್ಡದು ಅಲ್ಲ
ಡೈಮನ ಪೂಜೆಯ ಒಡ್ಡದೆ ಸಲ್ಲ"

**ಆ. ಎ:—** ಮಣಿವೆನು ನಿಮಗೆ ಡೈಮನು ದೇವ
ಮೀರಿದ ಅರ್ಥದಿ ಜಗವನು ಕಾವ.

**ಕೆ. ಎ:—** ನಾನೂ ಮಣಿಯುವೆ ಡೈಮನು ಭೂಪ,
ಅರ್ಥವ ಗಳಿಸುತೆ ತೊಳೆವಿರಿ ಪಾಪ

**ಇ. ಎ:—** ಸಾಷ್ಟಾಂಗವೆರಗುವೆ ಡೈಮನ ರಾಯ,
ಅರ್ಥಕೆ ಸವೆವಿರಿ ನಿಮ್ಮಯ ಕಾಯ.

(ದೂರದಲ್ಲಿ ಡೈಮನ್ ರಾಜರಾಣಿಯರು ಬರುವುದನ್ನು ಕಂಡು)

**ಡೆ. ಎ:—** ಯಾರೋ ಬರುವರು—ದೊರೆಯಿರಬೇಕು,
ಸರಿಯಿರಿ ಹಾದಿ, ಹೋಗಲಿ ವ್ಯಾಧಿ.

**ಆ. ಎ:—** 'ಹೋಗಲಿ ವ್ಯಾಧಿ'

**ಡೈ. ಎ:—** ಆಗಲಿ ಅಂದೆ—ಡೈಮನ ಮಂತ್ರ

**ಆ. ಎ:—** 'ವ್ಯಾಧಿ'ಯು ಬೇಸ; ಅರಸನಿಗೆಂಬುದು ಈ ಮಾತೇನೆ?

**ಡೈ. ಎ.—** ಡೈಮನ 'ವ್ಯಾಧಿ,'—ಮಂತ್ರದ ವ್ಯಾಧಿ.
ಅರ್ಥವೆ ಆಗದು ನಿನ್ನಿಂದ
ವಯಸಿನ ದಢಿ—ಎಂದೆನು ನಾನು!
ಸಾಕದು ಟೀಕೆ; ಸರಿಯಿರಿ ಹಾದಿ.

**ಆ. ಎ:—** (ಆ) ಆಟೆನು ಎಕ್ಕ ಎಂಬವ ನಾನು ಡೈಮನ್ ರಾಜಗೆ
ಮಣಿಯಲೆ ಏನು?

**ಡೈ. ಎ:—** ಆಟಕೆ ನೀನು ಮಣಿದರೆ ಏನು? ಹೆಸರಿಗೆ ಕೊರತೆಯೆ
ಆಟೀನು?
ಪರೀಕ್ಷೆಗೆಂದು ಹೆಚ್ಚುವುದಿಲ್ಲವೆ ಹೆಗಲಿಗು ಒಮ್ಮೆ ಲಾಟೀನು.

**ಆ. ಎ:—** (ಮಣಿಯುವನು; ಅಲ್ಲಿದ್ದವರೆಲ್ಲರೂ ಮಣಿಯುವರು.)

**ಡೈ. ರಾಜ:—**ಶುಭವಾಗಲ್ಲೈ ನಿನಗೆ, ಡೈಮೂನ ಕಾಯ.

**ಆ. ಎ:—** (ಆ) ವಂದನೆಯು ನಮ್ಮದಿರೆ ಹರಕೆ ಡೈಮನಗೇನು?

**ಡೈ. ಎ:—** ಕಾಯವೆಂಬುದು ಸರ್ವ; ಮಂತ್ರದಾ ಕಾಯವದು.
ಕ. ಆ. ಇಗಳು ಸೇರಿ ಕಾಯವಾದುವು ರಾಯ.
ಕಳವರ ಆಟೀನು ಇಸ್ಪೀಟುಗಳು ಸೇರಿ 'ಕಾಯ'ವೈಯ್ಯ.

**ಆ. ಎ:—** ಅಬ್ಬ, ಮಂತ್ರದ ಬಿಗುವೆ!

**ಡೈ. ರಾಜ:—**ಅಂಕೆ ಪ್ರಥಮದ ಮೂರ್ತಿ, ಮಾತೊಂದು ಹೇಳಲಿದೆ.

**ಡೈ. ಎ:—** ಮಂತ್ರವಾಗುವುದೀಗ, ಕಿವಿಯ ದೂರೊಯ್ಯುವಿರಾ?

**ಇ. ಎ:—** ಕಿವಿಯ ಒಯ್ಯಲು ಬೇಕೆ?

**ಆ. ಎ:—** ಕಿವಿಯೊಂದೆ ಪೋಗುವುದೆ; ಕಾಲು ಸರಿಯಲು ಬೇಕು,
ಡೈಮನನು ಬಲು ಚತುರ!

**ಕ. ಎ:—** ಮುಖವೆ ಅವನಿಗೆ ಚತುರ.

(ಅವರು ಸರಿಯುವರು)

**ಡೈ. ರಾಜ:—** ತಿಳಿಯದೇನದು ನಿನಗೆ ನಮ್ಮ ಅರಮನೆ ಸುದ್ದಿ?
ನಮ್ಮ ಕುವರಿಗೆ ಇಂದು ವಯಸು ತುಂಬಿದೆ ನೋಡು!
ಸಮಕುಲದ ಗಂಡಿಲ್ಲ—ವರಿಸಿ ಸೇರುವೆವೆನಲು,

**ಡೈ. ಎ:—** ವಯಸು ತುಂಬುವ ಮೊದಲೆ, ಎಣಿಸಬೇಡಾ?

**ಡೈ. ರಾಜ:-** ತುಂಬು ವಯಸಾಗಿಹುದು, ಮುಂದಣದ ದಾರಿಯೇನ್?
ನಿಮ್ಮದಿವೆ ಮನೆ ಹತ್ತು, ಬಿತ್ತಿಗಿಲ್ಲವು ಮತ್ತು.
ವಟುಗಳೆಲ್ಲರು ನೀವು ಮದುವೆ ಯೋಚನೆ ಸತ್ತು,
ಬ್ರಹ್ಮಚಾರಿಗಳೈಯ್ಯ—ಗಂಡಲ್ಲ, ಹೆಣ್ಣಲ್ಲ.
ಮದುವೆಯಾದರೆ ನಿಮ್ಮ ಕುಲಕೆ ಕುಲವೇ ಬಿತ್ತು.

**ಡೈ. ಎ:—** ಅಹುದಹುದು—ಹತ್ತು ಜನಗಳು ನಾವು,
ಮದುವೆಯಾಗುವರಲ್ಲ ಅಡರಿ ಬಂದರು ಸಾವು!

**ಡೈ. ರಾಣಿ:-** ರಾಜಕುವರಿಯು ಆವಳು, ಕೌಮಾರ್ಯ ಚೆನ್ನಲ್ಲ.

**ಡೈ. ಎ:—** ಗಾದೆಯೇ ಇಹುದಲ್ಲ—
ಕೆನ್ನೆಗೇಟದು ಸಲ್ಲ
ಕನ್ನೆಗೆ ಯೌವನವಲ್ಲ

**ಡೈ. ರಾಜ:-** ಗಾದೆ ಮಾತಂತಿರಲಿ, ಹಾದಿ ತೋರಿಸು ಎಕ್ಕ,
ಮುಂದಣದ ಹಾದಿ ತೋರಿಸು—ಚೊಕ್ಕ
ಕುಂದಣದ ದಾನವೀಯುವೆ ಪಕ್ಕ.

**ಡೈ. ಎ:—** ಮುಂದಣದ ದಾರಿಯೇ? ಇಹುದಿಹುದು; ಇರಬೇಕು;
ಇದ್ದೆ ತೀರಲುಬೇಕು; ಇಲ್ಲದಿದ್ದರೆ ಕಳೆಯ.

**ಡೈ. ರಾಣಿ:-** ಇರುವ ಹಾದಿಯ ಹೇಳು.

**ಡೆ. ಎ:—** ಡೈಮನರಿಗುಂಟು ಆಟೀನ ಹೆಣ್ಣಿನಧಿಕಾರ

**ಡೈ. ರಾಜ:-** ಡೈಮನರ ಗಂಡಿಗಿಹುದೈಯ್ಯ—ನಾಲ್ಕು ಕುಲದಲಿ ಕನ್ಯೆ.
ನಮ್ಮ ಕನ್ಯೆಗೆ ಇಹುದೇ—ಪರರ ಗಂಡಿನ ಹಕ್ಕು!

**ಡೈ.** ಎ:— ಡೈಮುನ ದೊರೆಯೆ, ಶಾಸ್ತ್ರ ನಮ್ಮದೆ ಇರಲು, ನಮಗೆ ಕಟ್ಟೇ?
ಶಾಸ್ತ್ರವೀಯುವ ಜನಕೆ, ಮುರಿವ ಹೆಕ್ಕೊ ಇಹುದು.
ಬಿತ್ತಿದವಗಿಲ್ಲವೇ ಫಲವುಣುವ ಅಧಿಕಾರ.
ಇರಲಿರಲಿ, ಬರುತಿಹನು ಡೈಮಾನ ಹತ್ತು
ಘಟ್ಟ ಬಿಡಿಸಲು ಬಹುದು ಈ ನಿಮ್ಮ ಕುತ್ತು

[ಡೈ. ಹತ್ತು ಬರುವನು.]

ಡೈಮಾನ ದಶಮರ್ಷಿ—ದೊರೆಯು ಕೇಳುವನಯ್ಯ
ಪ್ರಶ್ನೆಯೊಂದನು ಕಠಿಣ.
ಕುವರಿ ಅವರವಳಿಂದು ಹರೆದು ನೆರೆದಿಹಳಂತೆ
ಸಮಕುಲದ ಗಂಡಿಲ್ಲ, ಇನ್ನೆಲ್ಲು ಕಂಡಿಲ್ಲ

**ಡೈ. ಹತ್ತು**:-ಸಮಕುಲದಿ ಇಲ್ಲದಿರೆ?
ಡೈಮನಗೆ ಅಧಿಕಾರ ಎಲ್ಲ ಕುಲದಲಿ ಇಹುದು.

**ಡೈ. ರಾಜ**:-ಗಂಡಿಗಿಹುದಧಿಕಾರ; ಹೆಣ್ಣಿಗುಂಟೇ ಹೇಳು.

**ಡೈ. ಹತ್ತು**:-ಅದಕೇಕೆ ಸಂಶಯವು. ಶಾಸ್ತ್ರದಲಿ ಗಂಡು ಹೆಣ್ಣೆಂದಿಲ್ಲ;
ಡೈಮನಗೆ ಅದಿಕಾರ ಎಂದಿಷ್ಟೆ ಹೇಳಿಹುದು.
ನಮ್ಮವರ ಕನ್ಯೆ ಕೀಳು ವರಿಸಲು ಬಹುದು.
ಕೀಳು ಉತ್ತಮನ ವರಿಸಲು ಕೂಡ,
ಇಲ್ಲಿ ವಧುವು ವರಿಸಿದರಾಯ್ತು; ವರನು ವರಿಸುವುದಲ್ಲ—

**ಡೈ.** ಎ:— ವಿಬುಧರೊಳು ಅತಿಮಾನ್ಯ, ಡೈಮಾನ ಹತ್ತು
ಶಾಸ್ತ್ರವೆಂಬುವ ಹೊಲವ ಇವ ಚೆನ್ನಾಗಿ ಉತ್ತು
ಅನರಲ್ಲಿ ಬಿತ್ತುತಲಿ ತನ್ನ ಬುದ್ಧಿಯ ಬಿತ್ತು
ಫಲವಕೊಡಿಸುವನಯ್ಯ—ತೆಗೆದೊಡನೆ ಮುತ್ತು.

**ಡೈ. ರಾಜ**:-ಯೋಚನೆಯಿಂ ಮುಳುಗಿದ್ದೆ, ಬೇಸತ್ತು.

**ಡೈ.** ಹ:— 'ಬೇ' ಸತ್ತ ಜೀವನವೆ ಡೈಮನ್ನು.
'ಬೇ' ಜನಿಪ ಜೀವನವೆ ಬೊಮ್ಮನ್ನು.

**ಡೈ.** ಎ:— 'ಬೇ' ಸಾಯದಿರೆ?

**ಡೈ.** ಹ:— ಶೂದ್ರ.

**ಡೈ. ರಾಜ**:-ಉತ್ತಮರು ತಾವಿಹರಿ, ಹತ್ತಂಕೆ ಹೊತ್ತವರು.

**ಡೈ. ಪ:**— ಹತ್ತಂಕೆ ಹೆತ್ತವರು, ಹತ್ತಂಕೆ ಹೊರಿಸುವರು.
ತೆರಳಲೇ.... ಶುಭವಾಗಲೈ ದೊರೆಗೆ
ಕಲ್ಯಾಣವಾಗಲೈ ತಮ್ಮ ಕುವರಿಂಗೆ

**ಡೈ. ಎ;**— ನನಗೆ.

**ಡೈ. ಹ:**— ಒಂಟಿ ಡೈಮನನಿಂವಶುಭವಾಗದಿರೆ ಸಾಕು!

[ತೆರಳುವನು]

**ಡೈ. ರಾಜ:**-ಎಕ್ಕ ಡೈಮನ ಕೇಳು—ಎಲ್ಲ ಹೊರೆ ನಿನಗಹುದು
ಎಲ್ಲ ಕುಲಗಳ ಅರಸಿ ವರನ ಹುಡುಕಲು ಬಹುದು
ಕುವರಿ ಲಗ್ನದ ದಿನಕೆ, ಮನವ ತಣಿಸುವೆ ನಿನಗೆ

**ಡೈ. ಎ:**— ಅಲೆಯುವೆನು ಮನೆ ಮನೆಗೆ, ತಮ್ಮ ಶುಭವೇ ನನಗೆ

[ರಾಜ ರಾಣಿಯರು ತೆರಳುವರು]

ಆಟೀನ ಎಕ್ಕಣ್ಣ—ಬಾ ನನ್ನ ತಮ್ಮಣ್ಣ

[ಮರೆಗೆ ಸರಿದ ಆವನು ತಿರುಗಿ ಬರುವನು]

**ಆ. ಎ.**— 'ಬಾ ನನ್ನ ತಮ್ಮಣ್ಣ'

**ಡೈ. ಎ:**— ಏಕೆ ಇದು ಅನುಮಾನ?

**ಆ. ಎ:**— ತಮ್ಮಣ್ಣ ನೆಂದಿರಿ!
ಅತ್ತ ತಮ್ಮನು ಅಲ್ಲ; ಇತ್ತ ಅಣ್ಣನು ಅಲ್ಲ.
[illegible]ವೇ [illegible]ಗಾಗಲೊಲ್ಲ!

**ಡೈ ಎ.:**— ಡೈಮನರ ನುಡಿ ಹಾಗೆ, ಗೂಢದೊಳು ಗಾಢ!
ಅಣ್ಣತಮ್ಮರ ನಡುವೆ ಇರುವವನು ನಾನೇ
'ಓ ನಾನೆ' ಎಂಬ ಸಮತೆಯ ನುಡಿಯೆ 'ತಮ್ಮಣ್ಣ'

**ಆ. ಎ.:**— ನಿಜಕು ಬಲ್ಲಿದರೈಯ್ಯ, ತಮ್ಮೆಲ್ಲ ಮಾತೂ ಮಂತ್ರ!
ಇರಲಿರಲಿ, ಕರೆದಿರೇತಕೆ ಪೇಳಿ:
ದೊರೆಗಳೆನ್ನಿಂದ ಧುರವ ಬಯಸುವರೇನು!
ಕಾದುವವರೈ ನಾವು; ಕಾದುವೆವು, ಮಡಿಯುವೆವು.

**ಡೈ. ಎ.:**— (ಆ) ಬುರುಡೆಯನು ಬದಿಗಿರಿಸಿ.
(ಪ್ರ) ಅದ್ಭುತವು ನಿಮ್ಮಯ ಶೌರ್ಯ.
ಆದರಿದು ಕದನದಾ ಮಾತಲ್ಲ, ಮದುವೆಯಾ ಮಾತು.

ನಮ್ಮ ದೊರೆ ತಮ್ಮ ಕುಲದಲಿ ನಂಟು ಬಯಸುವನು.
ಆ. ಎ:— ತಿಳಿಯಿತೆಲ್ಲವು ಥಟ್ಟ! ಹೆಣ್ಣಿಗೇನಿದು ಗಾಳ?
ಡೈಮನರ ಕುಲ ಬಂದು, ನಮ್ಮ ಕನ್ಯೆಯರೊಯ್ದು
ನಮಗಿಲ್ಲವಾಗಿಹುದು—ಸುದ್ದಿಗಾದರು ಹೆಣ್ಣು!
ಆಟಿಸರು ಹತ್ತಿಹೆವು, ಮದ್ದಿಗಿಲ್ಲವು ಮದುವೆ.
ಡೈ. ಎ:— ಮದ್ದಿಗಲ್ಲವು ಮದುವೆ; ಮುದ್ದಿಗಿಹುದೈಯ್ಯ.
ಯೋದ್ಧರಲ್ಲವೆ ನೀವು, ನೆಲದ ಹೆಣ್ಣುಗಳೇಕೆ?
ಅರ್ಗಳರು ಕನ್ನೆಯರು ತಮಗಾಗಿ ಸಗ್ಗದಲಿ ಕಾದಿಹರು
ಸಗ್ಗದಾ ಅಂಗನೆಯರ್ ನಿಮಗಾಗಿ ಸೊರಗುತ್ತ ನಿಂದಿಹರು!
ಗಂಧರ್ವ, ಕಿನ್ನರರು, ಕಿಂಪುರುಷ ವೊದಲ್ಗೊಂಡು
ಚಂದ ಚಂದದ ಹೆಸರು—ಹೆಸರೆ ಮುದ್ದಿರಲಷ್ಟು
ರೂಪವೆಂತಿರಬೇಡ!
ಭುವಿಯೊಳಗೆ ಒಂದೊಂದೆ ಮದುವೆ; ಅಲ್ಲೊ ಮಿತಿಯಿಲ್ಲ!
ಇಂದ್ರನಿಗೆ ಇಹರಂತೆ—ಸಾಸಿರರು ಒಲವಿನರು.
ಆ. ಎ:— ಉಳಿದುದಷ್ಟೇ ಆಸೆ; ಅದಕಾಗಿ ಬದುಕಿಹೆವು.
ಇಳೆಯ ವಾಸನೆಯೆಲ್ಲ ನಾಲ್ಕು ದಿನಕೆ!
ನೆಲದೊಳಗಿನಾ ನಲ್ಲೆ
ನೀರ ಮೇಲಣ ಗುಳ್ಳೆ
ಸಂಖ್ಯೆ ಮೀರಿದರಂತು ಮುನಿಸಿಪಾಲಿಟಿ ಸೊಳ್ಳೆ!
ಆ. ಎ:— ಅಂತಿರಲು ತಮಗೇಕೆ ಅವರು?
ಡೈ. ಎ:— ಶಾಸ್ತ್ರದೊಳು ಅಂಕಿಸಿದೆ ಮದುವೆಯೆಂಬುವ ವಿಧಿಯು;
ಬೊಮ್ಮ ಮಾಡಿಟ್ಟ ವಿಧಿ—ಡೈಮನಗೆ ನಿಶ್ಚಿತದಿ.
ವಿಧಿ ಮೀರದಕೆ ಮದುವೆ.
ವಿಧಿ ಮೀರಿದವ ವಿಧುರ; ವಿಧಿ ಮೀರಿದರೆ ವಿಧವೆ.
ಡೈಮನನು ಎಂಬವನು ಮದುವೆಯಾಗಲೆ ಬೇಕು.
ತಪ್ಪಿದೊಡೆ—ಅದನು ಮಾಡಿಸಬೇಕು....ಹೇಗಿಹುದು?
ಶಾಸ್ತ್ರನುಡಿ ಹೇಳುವೆನು ಬಿತ್ತರಿಸಿ—ಕೇಳುವೆಯ ಏನು?
ಆ. ಎ:— ನನಗೆ ತೋಚುವುದೈಯ್ಯ....

'ನಮ್ಮ ಜನಗಳ ಸಾವು, ತಮ್ಮ ಮದುವೆಗು ಮೇಲು'

**ಡೈ. ಎ:—** ನಿಜ ನಿಜವು, ತಮ್ಮ ಜನಗಳ ಸಾವು,
ನಮ್ಮ ಮದುವೆಯ ಮೇವು.

**ಆ. ಎ:—** ಇರಲಿರಲಿ, ದೊರೆಯು ಅಂದುದು ಏನು?

**ಡೈ. ಎ:—** ದೊರೆಗೆ ಚಿಂತೆಯ ಕಂತೆ.
ಪತಿಯು ದೊರೆಯುವ ಮೊದಲೆ, ನೆರೆದಿಹಳು ಮಗಳಂತೆ.
ಜಾತಿಯೊಳು ವರನಿಲ್ಲ—ತಮ್ಮ ದೊರೆಗಿಹನೆ ಮಗ?

**ಆ. ಎ:—** ನಮ್ಮ ದೊರೆಗಿದ್ದರೈ ಹತ್ತು ನೂರು
ಇಂದು ಉಳಿದಿಹುದಿಲ್ಲ ಒಂದೆ ಚೂರು.
ನೋಟಕ್ಕೆ ಇದ್ದರೈ ಆನೆಯಂದದ ಜನರು
ಕಾಳಗದಿ ಮಡಿದರೈ, ಮಣ್ಣುಗೂಡಿದರು.

**ಡೈ. ಎ:—** ಎನ್ನದಿರು ಹಾಗೆ—
ಕಾಳಗದಿ ಮಿಾಯುತ್ತ ಸುರರ ಹೆಣ್ಣುಗೂಡಿದರೆನ್ನು

**ಆ. ಎ:—** ಸಮನೆ ಸಮ, ಅದುವೆ ಸಮ....ಅದರಿಂದ
ಆಟೇನು ಅರಸಂಗೆ ಸಂತಾನವೇ ಇಲ್ಲ

**ಡೈ. ಎ:—** ಗರ್ಭಿಣಿಯೆ ರಾಣಿ?

**ಆ. ಎ:—** ಪಡೆದರೂ ಮಡಿಯಲಿದೆ ಎಡೆಯೆಷ್ಟೊ!

**ಡೈ. ಎ:—** ತೆರಳಲೇ
ತೆರಳು ತೆರಳು. (ಆತ ಸರಿಯುವನು.)
ಕಳವಾರ ಎಕ್ಕಣ್ಣ, ಅಲ್ಲೇನು ಮಾಡುತಿಹೆ
ಬರಬಾರದೇನು?

**ಕ. ಎ:—** ಕರೆದಿರೇನೊಡೆಯ, ತೆರಳಲೇ ನಾನು!

**ಡೈ. ಎ:—** 'ಬಾ' ಎಂದೆ ನಾನು, 'ಹೋಗೆ'ನ್ನಲಿಲ್ಲ

**ಕ. ಎ:—** ಬಾಯಿಂದ ಹೋಗೆನ್ನಲಿಲ್ಲ.

**ಡೈ. ಎ:—** 'ಬಾ' ಎಂದೆನಂದೆ.

**ಕ. ಎ:—** ಡೈಮನರ ಮಾತದುವೆ, ಪ್ರತಿಯೊಂದು ಗೂಢ.
ಕರೆದಿರೇತಕೆ ಪೇಳಿ—

**ಡೈ. ಎ:—** ನಮ್ಮ ಅರಸಗೆ ಇಂದು ತಮ್ಮ ಸ್ನೇಹದ ಆಸೆ.

ಕುವರಿಯಿದೆ ಅರಸಂಗೆ ಕೊಡುವಿರಾದರೆ ಗಂಡು.
ಕಳವರರ ಕುಲದೊಳಗೆ, ವರಿಸದರು ಇರುವರೇ?

**ಕ. ಏ:—** ವರಿಸದರು ಇರುವರೇ—ಏತರದು ಕೊರತೆಯ್ಯೆ!
ಇರುತಿಹೆವು ಜನ ಹತ್ತು, ಹಣಕಾಗಿ ಅತ್ತತ್ತು
ಆಯುಷ್ಯ ಬೇಸತ್ತು ಮದುವೆ ಯೋಚನೆ ಬರಲು
ಮುಪ್ಪು ಬಂದಿತ್ತು, ಹೆಣ್ಣೆ ಸತ್ತಿತ್ತು—

**ಡೈ. ಏ:—** ಎಲ್ಲರೂ ಅಂತೆಯೇ, ಅರಸನೂ ಅಂತೆಯೇ?

**ಕ. ಏ:—** ಅರಸ ಬೇರೊಂದು ಪರಿ. ಆತಂಗೆ ಮದುವೆಯಾಗಿತ್ತು.
ಹೊನ್ನು ಗಳಿಸುವ ಭರದಿ, ಅದರ ಮರವೆಯಾಗಿತ್ತು.
ನೆನಪು ಮೊರಡುವ ವೇಳೆ—ಯಾರದೋ ಬೆನ್ನು ಹತ್ತಿತ್ತು.

**ಡೈ. ಏ:—** ನಿಮಗೇನು—ಕಳವರರು, ಕುಲದೊಳಗೆ ಸಿರಿವರರು
ನಿಮ್ಮ ಅಂಗನೆ ಹೊನ್ನು—ಮಣ್ಣುಗೂಡುವ ಹೆಣ್ಣೆ?

**ಕ. ಏ:—** ಆ ಮಾತು ನಿಶ್ಚಯವೆ? ಸಿರಿ ನಿಂತಲ್ಲಿ ನಿಲ್ಲುವಳೆ!

**ಡೈ. ಏ:—** ಅದಕೇನು? ಅದು ಹೋದಲ್ಲಿ ನೀವ್ ಹೋಗುತಿರೆ!
ನಮ್ಮಂತೆ ಅಲ್ಲ ನೀವ್, ನಮಗೆ ಲಗ್ನವು ವಿಧಿಯು
ದಾಟಲಾರದ ನದಿಯು—ನೋಡಿಲ್ಲಿ: ನಾ ವಟುವು
ಈಗ ವಟು—ನಾಳೆ ವಟವೃಕ್ಷ

**ಕ. ಏ:—** ನಾಳೆ ವಟ ವೃಕ್ಷ!

**ಡೈ. ಏ:—** ನೀನರಿಯೆ ಶಾಸ್ತ್ರಗಳ,
ಬ್ರಹ್ಮಚಾರಿಯು ಸಾಯೆ, ಬ್ರಹ್ಮರಾಕ್ಷಸ ಜನ್ಮ
ಸ್ವರ್ಗವೆಂಬುದೆ ಇಲ್ಲ
ವಟವೃಕ್ಷದೊಳು ವಾಸ; ಊಟಕ್ಕೆ ಉಪವಾಸ.

**ಕ. ಏ:—** ಡೈಮನಗೆ ಚಿಂತೆ ಸದಾ ಎಂಬುದನು ಕೇಳಿಹೆನು,
ಏಕೆಂಬುದರ ಅರಿವು ಆಯ್ತು ನನಗೀಗ.
ಇಂದಿನೂಟಕೆ ಅವನು ಬೆದರನೆಂಬುದ ತಿಳಿದೆ
ನಾಳಿನುಪವಾಸದಂಜಿಕೆ ಅವಗೆ!
ತೀರ ಸಹಜವು ಗೆಳೆಯ
ಸತ್ತಮೇಲ್ ವಡೆ ಅನ್ನ ಪಾಯಸಗುಳುಂಟೆಂಬ

ಗೊತ್ತು ಏನು? ಅದಕಾಗಿ ವಟವೃಕ್ಷವಾಸ—
ಬ್ರಹ್ಮರಾಕ್ಷಸನಾಗಿ ಕಾಡಿಯಾದರು ಜಗವ
ಉಣ್ಣಬಹುದೆಂದು,

ಡೈ. ಎ:— ಸಿರಿಯ ಮದ ನಿನಗಿಹುದು; ತೆರಳು ತೆರಳು
ನನ್ನಂಥ ಬಡವರನು ಕೂಡಿಕೊಂಬೆ
ಇಸ್ಪೇಟು ಎಕ್ಕಣ್ಣ, ದೂರ ನಿಂತಿಹೆ ಏಕೆ?
ನಿನ್ನೊಡನೆ ಮಾತೊಂದ ಕೇಳಲಿದೆ ಈಗ.
(ಇಸ್ಪೇಟು ಎಕ್ಕ ಮರೆಯಿಂದ ಮುಂದೆ ಬರುವನು.)

ಇ. ಎ— ನಿಮ್ಮ ಮಾತಿಂದೆಮಗೆ ಬಂದಿಹುದು ಲಾಗ,
ನಮ್ಮ ಮಾತನು ನೀವು ಕೇಳಲುಂಟೇ ಈಗ
ಆಜ್ಞೆಯೇನದು ಅರುಹಿ, ಮಾತು ಮಂತ್ರವು ನಮಗೆ.

ಡೈ. ಎ:— ವಿನಯವಿದೆ ನಿನ್ನೊಳಗೆ; ಕ್ಷೇಮವಾಗಲಿ ನಿನಗೆ
ನುಡಿಯೊಂದ ಕೇಳಿಲ್ಲಿ—ಶಾಸ್ತ್ರದಲಿ ಪೇಳುವುದು
'ಬಿದ್ದವರ ಎತ್ತಬೇಕೆಂದು ಉತ್ತಮರು' ನಾವುಗಳು.

ಇ. ಎ:— ಒದ್ದು ಬೀಳಿಸುತಿಹಿರಿ, ಅದಕಾಗಿಯೇನು?

ಡೈ. ಎ:— ಬೀಳಿಪುದು ಒಂದರ್ಥ; ಎತ್ತುವುದು ಮಗದರ್ಥ
ಅಷ್ಟಗಲಿ ಸಂಶಯವು—ದೂರ ಸರಿಯುವಿರೈಯ್ಯ
ಈಗ ಕೇಳ್ ವಾರ್ತೆಯನು; ನಮ್ಮ ದೊರೆಯಿಹನಲ್ಲ
ತಮ್ಮ ಕುಲದಲಿ ಇಂದು ನಂಟುತನ ಬಯಸುವನು.

ಇ. ಎ:— ಇದು ಒಂದು ಹೊಸತೇನು!
ಹಾರೆ ನಮ್ಮಯ ಮುದ್ರೆ; ಆಗತೆ ನಮ್ಮಯ ಕಜ್ಜ;
ಕೃಷಿಯು ನಮ್ಮಯ ಜೀವ.
ಹಗಲೆಲ್ಲ ದುಡಿದುಡಿದು ಗುಡಿಯ ಸೇರುವ ಗಳಿಗೆ
ನಮ್ಮ ಹೆಣ್ಣುಗಳೊಂದು ಕರಕೆ ಸಿಗವೈ ನಮಗೆ!
ದುಡಿಯುವಾ ಗಂಡೆಂಬ ಬಿರುದಷ್ಟೆ ನಮಗೆ!
ಕುಲದ ಮಡದಿಯರ್ ಮಾತ್ರ ಗುಡಿಯ ಹೊರಗೆ.

ಡೈ. ಎ:— ಸಲ್ಲದಾರೋಪವನು ಹೊರಿಸುವೆಯ ನೀನು!
ಪಾಪಕಾರ್ಯಕೆ ನಾವು ಕರವನೆಸಗುವರಲ್ಲ—

ನಮ್ಮ ಕರಸ್ಪರ್ಶದಲಿ ಪಾಪನಿಲುವುದೆ ಇಲ್ಲ.

ಇ. ಎ:— ನಮ್ಮ ಕುಲದಲಿ ಹೆಣ್ಣು ಉಳಿಯುವುದು ಇಲ್ಲ.

ಡೈ. ಎ:— ಅಂಥ ಸಂಶಯ ಕಳೆಯೆ ಕಾರ್ಯವೆಸಗುವೆವಯ್ಯ.
ಪರರ ಹೆಣ್ಣಿನ ಚೌರ್ಯದಾರೋಪ ಬೇಡೆಮಗೆ,
ನಮ್ಮ ಹೆಣ್ಣನು ಈಗ ಕೊಡಲು ಸಿದ್ಧವು ಹೊರಗೆ
ಚುಟುಕಿನಲಿ ಹೇಳಣ್ಣ—ನಿಮ್ಮಲ್ಲುಂಟೇ ಗಂಡು?
ಅರಸಂಗೆ ಉಂಟೇನು ಗಂಡು ಸಂತತಿ ಇಂದು?

ಇ. ಎ:— ತಪ್ಪಾಯ್ತು ಡೈಮುನಿಯೆ, ಮಾತಿಲ್ಲ ಇನ್ನು.
ನಮ್ಮ ಕುಲದಿಹ ಹೆಣ್ಣ ಕದ್ದೊಯ್ದು ಹಲವು ಜನ—
ಗಂಡುಸರ ಬಿಟ್ಟಿಹರು ಅದಕಾಯ್ತು ಸಂಶಯವು.

ಡೈ. ಎ:— ಇನ್ನುಂಟೆ ಸಂಶಯವು?

ಇ. ಎ:— ಇನ್ನಿರದು, ಮುನ್ನಿರದು. ಸತ್ಯ ಉಸುರುವೆನೀಗ
ನಮ್ಮರಸು ಮನೆತನದಿ ಗಂಡೊಂದು ಉಳಿದಿಲ್ಲ;
ಹುಟ್ಟಲ್ಲೆ ಹುಟ್ಟಿತ್ತು, ಕೆಲವೊಂದು ಬಾಳಿತ್ತು;
ದಾರಿದ್ರ್ಯ ಸಂಕಟದಿ ಮಣ್ಣು ಕೂಡಿತ್ತು.
ನಾವ್ ಹತ್ತು ಅಂಕೆಗಳು ಮದುವೆಯನು ಬಯಸಿತ್ತು;
ಮಡಿತ ಮುಗಿಯುವ ವೇಳೆ ಹೆಣ್ಣು ಸಂದಿತ್ತು
ಇನ್ನೊಂದು ಜನವಿಹುದು—ಕುಲವೇನೊ, ಇಷ್ಟೇಟು
ಅರಮನೆಯೊಳಲ್ಲಿದಾಟ, ಎಲ್ಲರೊಳು ಬಲು ಭೇಟ,
ನೋಡಲಿಕೆ ಮರಿಯಾನೆ, ಮದುವೆಯಾದುದ ಕಾಣೆ

ಡೈ. ಎ:— ಯಾರವನು? ಪರಿಚಯವೆ? ಅಂಕಿತನೆ? ನಾಮಾಂಕಿತನೆ?

ಇ. ಎ:— ಸೋಂಕಿತನು ಪದಸೋಂಕಿತನು ಇಹನಾತ;
ಮನದೊಳಗೆ ಎಣಿಸುತಿಹ ಲಲಾಮನೆಂದು,
ಕರೆಯುವುದು ಜಗವೆಲ್ಲ ಗುಲಾಮನೆಂದು.

ಡೈ. ಎ:— ಮೇರೆ ಮೀರಿತು ಮಾತು; ಸೊಕ್ಕಿಹೆಯ ತಲೆಬಾತು!
ಗುಲಾಮ ಎಂಬವನು ಗಂಡೇನು, ಹೆಣ್ಣೇನು?
ಅವಗೆ ಕುಲವೇನು ಬೆಲೆಯೇನು? ನಡಿ ನೀನು.
ಡೈಮನರಲಿಲ್ಲವೆ ಗುಲಾಮನೆಂಬವನು?

ನಿಮ್ಮವರ ಗುಲಾಮುನನ್ನರಸ ಬೇಕೇನು—
ಛೀ ನಡಿ ನೀನು—ನಡಿ ನೀನು,

(ಇಸ್ಪೀಟು ಎಕ್ಕ ತೆರಳುವನು.)

ಗಂಡಿಲ್ಲದಿರೆ ಮುಂದೆ ಮಾಡಬೇಕೇನು?
ಗಂಡಿಲ್ಲದೆಯೆ ಮದುವೆ ಆಗದೇನು?
ಹೆಣ್ಣಿಲ್ಲದೆಯೆ ಚಾಪೆ ಮದುವೆಯಾಗದೊ—ಏನು?
ಅದರಂತೆ ಗಂಡಿಲ್ಲದೆಯೆ ಲಗ್ನ ಆಗಲಿಕ್ಕೇನು?
ಲಗ್ನಕ್ಕೆ ಬೇಕೇನು—?
ವಧು, ವರ, ವಿಪ್ರಾಗ್ನಿ—ವಧುವುಂಟು
ವಿಪ್ರನಾನ್, ಅಗ್ನಿಯಿದೆ—ವರನಿಗಷ್ಟೇ ಕೊರತೆ.
ಆವರೇಂ? ಆದರೇಂ? ವಧುವರನ ಬದಲಿಂಗೆ
ವರವಧುವೆ ಉಂಟಲ್ಲ—ಮಂತ್ರಕಾಗದು ದೋಷ.

(ಸಾಗುವನು.)

## ಎರಡನೆಯ ಅಂಕ

(ಒಬ್ಬಂಟಿಯಾಗಿ ವಿಲಪಿಸುತ್ತ ಬರುವ ಡೈಮನ್ ಕುವರಿ)

**ಡೈ. ಕು:**— ಭ್ರಮರಗಳಿಲ್ಲದ ತಾಣಿನಲಿ ಜನಿಸುವುದೇನ್ ಕಮಲ?
ತಿಮಿರವದಿಲ್ಲವ ಬಾನಿನಲಿ ಜನಿಸುವುದೇನ್ ತಾರಾ?

(ಇವಿರಿಸಿಂದ ನಾಲ್ವರು ಇಸ್ಪಿಟು ಕುಲದವರು ಬರುವರು.)

**ಇ. ೨:**— ಯಾರೇನಾಗಲಿ, ಯಾವುದೆ ಬರಲಿ, ನಿಲ್ಲುವುದೇನ್ ಜಗವು?
ಯಾರೇ ಏಳಲಿ, ಯಾರೇ ಬೀಳಲಿ, ನಮ್ಮದೆ ಮಿಗೆ ಸೊಗವು.
ಅಂಕೆಯೆ ಎಲ್ಲವು, ಅಂಕೆಯೆ ಬ್ರಹ್ಮವು--ಅಂಕೆಯೆ ಸರ್ವಸ್ವ.
ಅಂಕೆಯು ಎಂದರೆ ಒಂದರಿಂ ಹತ್ತು; ಅಷ್ಟರಿಂ ಪೂರ್ಣವು
ಜಗತ್ತು.

**ಡೈ. ಕು:**— ಯಾರೆಲೆ ನೀವು? ಯಾವುದು ಜಗವು? ಎಲ್ಲಿದೆ
ಮಿಗೆ ಸೊಗವು?

ಯಾರದು ಅಂಕೆಯು ಯಾರಿಗೆ ಸಲುವುದು—
ಅಂಕೆಗೆ ಸಿಗುವುದೆ ಸೊಗವು?

**ಇ. ೨:—** ಅಂಕೆಯು ಹೆಚ್ಚು ಎಂಬುವ ನಾವು, ಇಸ್ಸಿಟು ಎಕ್ಕಾ, ಇನ್ನೊಂಬತ್ತು;
ಅಂಕೆಯು ಅಷ್ಟು—ಹತ್ತಕೆ ಅಸ್ತು; ಅಂಕೆಗೆ
ಸಿಗುವುದು ಸೊಗವು.

**ಡೈ. ಕು:**— ನಿಮ್ಮಯ ಮಾತು ತಿಳಿಯದು ನನಗೆ, ಸುಮ್ಮನೆ
ವೇಳೆಯ ಮಾಡದಿರಿ;
ಕಮ್ಮನೆ ಕಮಲವು ಕಂಪನು ಸೂಸಲು, ಭ್ರಮರವು
ಬಾರದೆ ಹೇಳುವಿರಾ?

**ಇ. ೨:**— ಕಮಲವು, ಭ್ರಮರವು—ಅಂಕೆಯ ಹೊರಗೆ;
ಒಂದೂ ನಮ್ಮನು ಕೇಳದಿರು;
ಉಳಿವಿಕೆ, ಅಳಿವಿಕೆ—ಇಷ್ಟೇ ತಿಳಿವಿಕೆ;
ಮಿಾರಿದುದೊಂದೂ ನಂಬದಿರು.

**ಡೈ ಕು:**— ತಾರೆಯು ಇಂದು ತಿಮಿರವನರಸಿ
ಹೊರಟಿದೆ ಸತ್ಯವು ನೋಡಿರೆಲಾ;
ಹುಡುಗರೊ ನೀವು, ಹುಡುಗಿಯರೇನು?
ಮದುವೆಯು ಮೊದಲೆ ಆಗಿಹುದೇನು?
ತುಂಬಿಯು ಬಣ್ಣ ತಾಳಿಹಿರಣ್ಣ,
ಉಡುಗೆಯಲೊಂದೂ ತಿಳಿಯದು ಭಿನ್ನ;
ಕಮಲದ ಕಂಪನು ಅರಿತಿಹ ಭ್ರಮರದ
ಅರಿತವರೇ ನೀವ್ ಚೆನ್ನ?

**ಇ. ೨:**— ಗಂಡೋ ಹೆಣ್ಣೋ ಅಂಕೆಗೆ ಹೊರತು—
ಒಂದರಿಂ ಹತ್ತು ಇಷ್ಟೇ ಗೊತ್ತು,
ಮದುವೆಯೊ ಮಸಣವೊ ಒಂದೂ ತಿಳಿಯೆವು;
ಮಣ್ಣಿನ ಕಜ್ಜದಿ ವೇಳೆಯು ಸಿಲ್ಲದು.

**ಡೈ. ಕು:**—ತೆರಳುವುದೈಯ್ಯ ಅಂಕೆಯ ಜಂಭ!
ಮದುವೆ, ಮಸಣ ಒಂದೇ ಎಂಬ

(ಅವರು ತೆರಳುವರು.)

ಭ್ರಮರವದಿಲ್ಲದ ನಾಡಿನಲಿ, ಜನಿಸುವುದೇನ್ ಕಮಲ
ತಿಮಿರವದಿಲ್ಲದ ಬಾನಿನಲಿ, ಉದಿಸುವುದೇನ್ ತಾರಾ?

(ಆಕೆ ಸರಿಯುವಳು. ಆಗ ಡೈಮನ ರಾಜ ರಾಣಿಯರ ಆಗಮನವಾಗುವುದು.)

**ಡೈ. ರಾಣಿ:**-ಡೈಮನರ ಆಳ್ವವನೆ, ಏನಿದುವೆ ದುರ್ದೆಸೆಯು?
ಕುವರಿ ಎಮ್ಮವಳಿಂದು ಉನ್ಮಾದವಾಂತಿಹಳು
ಮಾತುಮಾತಿಗೆ ಕಮಲ, ಮಾತುಮಾತಿಗೆ ಭ್ರಮರ
ತಾರೆಯಂದೊರೆಯುವಳು
ಒಂದೆ ಮಾತಿನ ಅರ್ಥ ಎನಗಾಗದಿಹುದು
ಹೆರರ ಕುಲವನು ಹೊಕ್ಕು ಒಳಕೆ ಬೆಳಸಿದರೇನು?
ಶಾಸ್ತ್ರಗಳು ಒಪ್ಪುವುವೆ?

**ಡೈ. ರಾಜ:**- ಶಾಸ್ತ್ರವನು ಇತ್ತುವರು ನಾವೆ ಇರಲು,
ದೋಷದ ಭೀತಿಯು ಏನು ಉರುಳು?
ಒಪ್ಪಿದ ವರನನು ವರಿಸುವಳು, ಡೈಮನ ಪದವಿಗೆ ಎತ್ತುವಳು.
ನೋಡಲ್ಲಿ ಬರುತಿರುವ ಡೈಮಾನ ಎಕ್ಕನವ
ವರನ ಶೋಧಿಸಿ ಜವದಿ ಕರೆದು ತರುವ.

(ಡೈಮನ್ ಎಕ್ಕನು ಬರುಪನು.)

**ಡೈ. ಎ:**— ವಂದನೆಯು ದೊರೆಗಳಿಗೆ, ಅದುವೆ ರಾಣಿಯರಿಂಗೆ

**ಡೈ. ರಾ:**— ಡೈಮನು ಎಕ್ಕ, ಸಿಕ್ಕಿತೆ ಲೆಕ್ಕ—ಗಂಡು ಹೆಣ್ಣು, ಎಷ್ಟೆಂದು?
ಯಾರ್ಯಾರ್ ಕುಲದಿ ಎಷ್ಟೆಷ್ಟೆಂದು—
ಗಂಡಿನ ಮೊತ್ತದಿ ಹೆಣ್ಣನು ಕಳೆಯೆ
ಉಳಿಯುವ ಶೇಷವು ಏನೇನೆಂದು—ತಿಳಿಯಿತೆ ಲೆಕ್ಕ?
ಕುಲವದು ಇರಲಿ—ಲೆಕ್ಕವು ಬರಲಿ, ಗಂಡೇ ಮಿಗಲಿ
ಕುವರಿಯ ಜೀವನ ಸೊಗಯಿಸಲಿ.
ನಿನ್ನಯ ಶೋಧೆಯು ಯಶಸ್ವಿಯಾದರೆ
ಎಕ್ಕನ ಬೆಲೆಯನು ಹೆಚ್ಚಿಸುವೆ—
ಎಕ್ಕನ ಮುಂದಕೆ ಯಾರಿಲ್ಲೆನಿಸುವೆ
ಹಕ್ಕಿಗು ಮೇಲಕೆ ಹಾರಿಸುವೆ!

ಡೈ. ಎ:— ಈ ಡೈಮನ್ ಎಕ್ಕ ಸುತ್ತಿದ ಲೋಕ,
ಮುಗುಚಿದ ನಾಕ; ಅದರಿಂ ಬಂದಿದೆ ಶೋಕ!
ಆಟಿನು ಕುಲದ ಗಂಡುಗಳೆಲ್ಲರು ನಾಕಕೆ ತೆರಳಿದರು.
ಇಸ್ಪಿಟು ಕುಲದ ಗಂಡುಗಳೆಲ್ಲ ಮಣ್ಣನೆ ಮುಕ್ಕಿದರು;
ಕಳವರ ಕುಲದ ಗಂಡುಗಳಂತು ಮುಪ್ಪನು ತಾಳಿಹರು;
ಇಸ್ಪಿಟು ಮನೆಯ ಗುಲಾಮನೊಬ್ಬ ಉಳಿದಿಹನೆಂಬವರು,
ಗಂಡಿನ ಸಂಖ್ಯೆಯೊಳ್ ಹೆಣ್ಣನು ಕಳೆಯೆ—
ಆವನೊಬ್ಬ ಉಳಿಯುವನು
ಗಂಡೋ ಹೆಣ್ಣೋ-ಎಣಿಕೆ ಹಾಕಲು, ಶಿಖಂಡಿಯಾಗುವನು.

ಡೈ. ರಾಜ:- ಲೆಕ್ಕದ ಪಂಡಿತ ಮುಚ್ಚೆಲೆ ಬಾಯಿ, ಅಶುಭವನಾಡದಿರು.
ಶೂದ್ರರ ಮನೆಯ ಶಿಖಂಡಿ ಲಗ್ನವೆ-ಶಿವ ಶಿವ ನುಡಿಯದಿರು,

ಡೈ. ರಾಣಿ:- ಲೆಕ್ಕವ ಹೇಳೋ ಡೈಮನು ಎಕ್ಕ—ಹೆಚ್ಚಿಗೆ ಯಾರೆನ್ನು,
ಗಂಡೋ ಹೆಣ್ಣೋ ಟೋಟಲು ಮಾಡಿ, ಮಿಗುವುದು ಎಷ್ಟೆನ್ನು?

ಡೈ. ಎ:— ಲೆಕ್ಕ ಅರುಹುವೆ ತಾಯಿ, ಲಾಲಿಪುದು ತಾವದನು;
ಅರಸು ಕುಲದಲಿ ಜನ ನಾಲ್ಕು, ರಾಣಿಯರು ನಾಲ್ಕು;
ತಮ್ಮ ಕುವರಿಯು ಇನ್ನು—
ನಾವುಗಳು ಜನ ಹತ್ತು, ಈ ವಿಪ್ರ ಜಗತ್ತು;
ಯತಿಪಟ್ಟ ಬಂದಿಹುದು, ಸತಿಕೂಟ ತಪ್ಪಿಹುದು.

ಆ. ಎ:— (ಕಳವರ ಎಕ್ಕ, ಆಟಿನು ಎಕ್ಕ ಇಸ್ಪಟು ಎಕ್ಕರು ಮುಂದೆ ಬಂದು)
ನಾವ್ಯೆಯೋಧರು ಲೆಕ್ಕಕೆ ಹತ್ತು,
ಮದುವೆಯನೊಪ್ಪೆವು; ಮಣ್ಣಿನ ಜಗತ್ತು
ಸ್ವರ್ಗದಲಿ ಕನ್ನೆಯರು ಎಮಗಾಗಿ ಕಾದಿಹರು
ಸುರಗಿ ಹೂವಿನ ತೆರದಿ ಸೊರಗಿ ಬೆಂಡಾಗಿಹರು
ನಮ್ಮ ಬರವನು ಕಾದು; ಅಲ್ಲಿಯೇ ಬೆಂದಿಹರು.

ಕ. ಎ:— ಕಳವರರ ಕುಲದಲೂ ಲೆಕ್ಕಕ್ಕೆಹರ್ರೈ ಹತ್ತು
ಹೊನ್ನನರಸುತೆ ಪೋಗೆ—ಮುಪ್ಪು ಬಂದಿತ್ತು

ಇ. ಎ:— ಹಾರೆಯ ಮುದ್ರೆಯ ನಾವೂ ಹತ್ತು,
ಮಣ್ಣಿನ ಕೆಲಸವು ಮುಗಿಯದೆ ಇತ್ತು,

ಅತ್ತು ಅತ್ತು ದಿನವೆಲ್ಲ ಉತ್ತು—
ಹೆಣ್ಣಿನ ವಾಸನೆ ಸತ್ಹೋಗಿತ್ತು.

**ಡೈ. ಏ**— ಸರಿಯಿರಿ ದೂರ, ಅಂಕೆಗಳ್ ಬರಡು.
ನೋಟಕೆ ಮಾತ್ರ ಮನುಷ್ಯ ಕೊರಡು.
ಅಂಕೆಯ ದಾಸ್ಯದಿ ಜೀವನ ತೆತ್ತು
ಪ್ರೇಮದ ಕಲ್ಪನೆ ಹೋಗಿದೆ ಸತ್ತು.

(ಎಕ್ಕಗಳು ದೂರ ಸರಿಯುವುವು)

**ಡೈ. ರಾಣಿ**:-ಉತ್ತಮ ಡೈಮನ ಕರೆಯಿಸಿ ಬೇಗ; ಕೇಳುವುದಿದೆ ಒಂದು.

**ಡೈ. ರಾಜ**: ಹತ್ತರ ಡೈಮನಗಿನ್ನುತ್ತಮರಿಲ್ಲ, ನೋಡಲ್ಲಿ ಬಂದನು ಮುಂದು,
ಕ್ಷೇಮವೆ ಹತ್ತರ ಉತ್ತಮನೆ?

**ಡೈ. ೧೦**:—(ಬರುವನು) ದೊರೆಗಳು ಕರೆದಿರಾ? ಸಿಕ್ಕಿತೆ ವರವರ?
ಯಾರೇ ಆಗಲಿ ಕೊಡಿಸುವ ಜನಿವಾರ.

**ಡೈ. ರಾ**:— ಮಿಕ್ಕುವ ಗಂಡೇ ಇಲ್ಲವು ಲೆಕ್ಕದಿ
ಅದಕೇ ಕರೆದುದು—ಹೇಳುವಿರಾ?
ಒಂದೇ ಗಂಡಿಗೆ ಹೆಣ್ಣೆರಡಾಗವೆ
ಶಾಸ್ತ್ರದ ಅಭಿಮತ ತಿಳಿಸುವಿರಾ?

**ಡೈ. ೧೦**:— ಒಂದೇ ಹೆಣ್ಣಿಗೆ ಗಂಡೆರಡಾಗದು,
ಒಂದೇ ಹೆಣ್ಣಿಗೆ ತೊಟ್ಟೆರಡಾಗದು,
ಅಂಕೆಯ ಬೂಕಿನೊಳಿಷ್ಟೆ ಇದೆ.

**ಡೈ ರಾಣಿ**:—ಹಾಗಿರೆ ಆಟೆನು ಅರಸಗೆ ಈವುದು
ಅವನನು ಡೈಮನ ಗೈಯುವುದು.

**ಡೈ. ರಾಜ**:-ಕುವರಿಯ ವರಿಸಲು ಅವನೇನೊ ಡೈಮನು
ಥಟ್ಟನೆ ಆಗುವನು.
ಆದರೆ ಆಟಿನ ರಾಣಿಯ ಗತಿಯೇನ್
ಹೇಳುವುದೇನಾಗಮವು?

**ಡೈ. ಜ**:— ಒಮ್ಮೆಗೆ ಡೈಮನಿ ಆಟಿನ ವರಿಸಲಿ
ಆಟಿನ ಕುಲದಂಕೆ ತಪ್ಪುವುದು.

ಅವನೇ ಡ್ರೈವುನ ಆಗುವ ಬಳಿಕ
ರಾಣಿಗೆ ಡ್ರೈವುನಿ ಒಪ್ಪುವಳು.

**ಡ್ರೈ. ರಾಜ**:-ರಾಣಿಯೆ ಲಾಲಿಸು, ವಿಚಾರವಮಾಡು
ತೊಡಕಿದೆ ಇಲ್ಲೊಂದು.
ಸವತಿಯು ಸಹಿಸುತೆ ಇರುವಳೆ ಮಗಳು?
ಒಪ್ಪದಿರೇನ್ ಗತಿ ಇಂದು?

**ಡ್ರೈ. ರಾಣಿ**:-ಹತ್ತರ ವಿಬುಧರೆ ಹೇಳಿರಿ ತವಕದಿ
ಶಾಸ್ತ್ರದಿ ಉಂಟೇ ಈ ವಸ್ತು?
ಗಂಡಿಗೆ ಅಗಿಯೆ ಹೆಣ್ಣನು ಕೊಂದರೆ
ಒದಗುವುದೇ ವಿಪತ್ತು?

**ಡ್ರೈ ಹ**:— ಅಂಕೆಯ ಗ್ರಂಥದಿ ಇಷ್ಟೇ ಉಂಟು,
ಹೇಳಲು ಅಂಜುವೆನು.
ಒಂದರಿಂ ಹತ್ತು ಕೊಂದರೆ ಮಾತ್ರ
ಯಮನವ ಬಾಧಿಪನು.
ಅಂಕೆಗೆ ಕೊರತೆಯು ಬಾರದ ರೀತಿಯು
ಕೊಲೆಯೇ ಕೊಲೆಯಲ್ಲ.
ಮದುವೆಯ ಹೆಣ್ಣು ಗಂಡನ ಒಳಗೆ
ಲೆಕ್ಕಕೆ ಸೆಲೆಯಲ್ಲ.

**ಡ್ರೈ ರಾಣಿ**:—ಮನವನು ಬಿಡಿಸುವ ಧೈರ್ಯವು ಮೂಡಿದೆ
ಅನುತಿದೆ ಎನ್ನ ಎದೆ
ಆಟಿನ ರಾಣಿಯು ಮುಗಿಸಿದ ಒಡನೆ
ಎಲ್ಲಿದೆ ಸವತಿ ಹೊರೆ!

**ಡ್ರೈ ಹ**:— ಶಾಸ್ತ್ರದಿ ಇದರ ಉಕ್ತವೆ ಇಲ್ಲ.
ನಿರುಕ್ತವಾಯಿತಿದು.
ಅದರಿಂ ಸಂಶಯ ತೊರೆಯಲು ಬಹುದು
ಸರಕ್ತ ಕೊಲೆ ಬೇಡ.
ಅಲ್ಲದೆ, ಅಂಕೆಗೆ ಹತ್ತರ ಮಡಿಯಲಿ
ಕಾಂಚನ ದಾನವನು

ಚೆಲ್ಲುತೆ ಮಾಡಲು ನಿಲ್ಲದು ದೋಷವು
ಪಂಚಮ ವೇದವಿದು.

**ಡೈ ರಾಣಿ**:—ಮಗಳನು ಒಪ್ಪಿಸಿ ಮಾಡುವ ಇಷ್ಟು.
ತೆರಳುವ ದೊರೆರಾಯ!

**ಡೈ ರಾಜ**.--ಮಗಳಿಗೆ ತಿಳಿಸದೆ ಮಾಡುವುದೊಳ್ಳಿತು.
ಅದುವೇ ನಿರುಪಾಯ

(ತೆರಳುವರು.)

## ಮೂರನೆಯ ಅಂಕ

(ಇಸ್ಪಿಟು ಗುಲಾಮನು ಒಂಟಿಯಾಗಿ ವಿಚಾರಮಾಡುತ್ತ ಬರುವನು.)

ಇ. **ಗುಲಾಮ**:—ಕರೆವರು ನನ್ನನು ಗುಲಾಮನೆಂದು
ಕುಲಕು ಶೀಲಕು ಬಾಹಿರನೆಂದು
ತಳ್ಳುವರೆನ್ನನು ಕೆಲಸಕೆ ಮುಂದು,
ಒಳ್ಳೆಯ ಕೆಲಸಕೆ ಕರೆಯರು ಎಂದು.
ಚಾಕರಿಗೆಷ್ಟೋ ಗುಲಾಮ ಬೇಕು.
ಮಾನಕೆ ಮಾತ್ರ ಗುಲಾಮ ಕಾಕು.

(ಡೈ. ಎಕ್ಕ ಬರುವನು.)

**ಡೈ**. ಎ:— ಯಾರೈ ನೀನು? ಗುಲಾಮನೇನು?
ಅರಮನೆಗಂತು ನೀನೇ ಮುಖ್ಯ
ದೊರೆಗೂ ಉಂಟು ನೀಚರ ಸಖ್ಯ!

ಇ. **ಗು**:— ಡೈಮನರ ಕುಲದೀಪ! ವಂದಿಪನು ಗುಲಾಮನಿವ;
ಒಂದಿಹುದು ಸಂಶಯವು, ಮನವದರಿಂ ನೊಂದಿಹುದು;
ಅಂಕೆ ಅಂಕುಶ ಹಿಡಿದು, ಲೋಕ ಆಳೆವಿರಿ ತಾವು
ಹೇಳುವಿರ ನನಗಿಂದು 'ಅಂಕೆ ಬಾಹಿರ ನಾನು
ಏತಕೆಂದು?'
ಅರಸು ಅಂಕೆಗೆ ದೂರ, ರಾಣಿ ಅಂಕೆಗೆ ಸೇರ
ಉಳಿದಿರುವ ಜಗಕೆಲ್ಲ ಅಂಕೆ ಜೀವನ ಸಾರ.

ಗುಲಾಮನೊಬ್ಬನವ ಏಕೆ ಅಂಕೆಗೆ ಭಾರ?
ಮನುಜನಲ್ಲವೆ ನಾನು? ಘನತೆ ಏತಕೆ ಬಾರ?

**ಡೈ. ಎ:**— ಅಂಕೆ ಶಾಸ್ತ್ರಗಳೆಲ್ಲ ನಿನಗೆಲ್ಲ ಹೇಳಿಲ್ಲ.
ಅಷ್ಟು ತಿಳಿದರೆ ಸಾಕು ಇನ್ನೇನು ಬೇಕಿಲ್ಲ.
ಅಂಕೆ ಕಾಯುವ ಅರಸು ಅಂಕೆಗೇನೊಳಗಲ್ಲ.
ಅಂಕೆಗೇ ಮೇಲ್ ಅವನು; ಅಂಕೆಗೂ ಕೀಳ್ನೀನು
ಅದಕಾಗಿ ಅಂಕೆ ನಿನಗಲ್ಲ; ನೀನ್ ಅಂಕೆಗಲ್ಲ;

**ಇ. ಗು:**— ಮಾತಾಡಿ ನಿಮ್ಮಲ್ಲಿ ನನಗೆಂದು ಗೆಲವಿಲ್ಲ.
ದಯಮಾಡಿ ಶಂಕೆಯನು ಪರಿಹರಿಸಬೇಕಲ್ಲ!

**ಡೈ. ಎ:**— ಕೀಳು ಮೇಲಾಗದೈ, ಮೇಲು ಕೀಳಾಗದು.
ನಾವು ಉತ್ತಮರಿಹೆವು ಅದರಿಂದ ನೀ ಕೀಳು,
ನೀನು ಕೀಳಿಹೆ ನಿಜಕು, ಅದರಿಂದ ನಾವ್ ಮೇಲು.
ಇಷ್ಟು ಸುಲಭದ ತತ್ವ ತಿಳಿಯಲಿಕ್ಕೇನು!
'ಹಾಲು ಹಗ್ಗ ನ್ಯಾಯ'—ಬಲ್ಲಿಯೇನಯ್ಯ?

**ಇ. ಗು:**— ಇಲ್ಲ ಇಲ್ಲವು ರಾಯ, ಬಣ್ಣಿಪುದು ಜೀಯ್ಯ.

**ಡೈ. ಎ:**— ಹಸುವೆಂಬ ಡೈಮನಿಗೆ ಅಂಕೆಯೇ ಹಗ್ಗ.
ಹಸುವೀವ ಹಾಲದುವೆ ಅಂಕೆ ಮೇಲಿನ ಹಾಲು.
ಹಾಲು ದೊರೆಯಲು ನೋಡು ಹಸುಬೇಕ ; . ಶಂಕೆ.

**ಇ. ಗು:**— ಸಮನೆ, ಅದರಿಂದ—

**ಡೈ ಎ:**— ಸೆಗಣಿ ಹಾಕಲು ಬೇಕೆ ಇಷ್ಟೆಲ್ಲ ಸಂಭ್ರಮವು?

**ಇ. ಗು:**— ಅತಿಯಾಯ್ತು ಉಪಮಾನ! ಬಡತನಕೆ ಅವಮಾನ!
ತಮಗು ಬರೆ ದುಮ್ಮಾನ ತಿಳಿದೀತು ಡೈಮಾನ!
ಅಬ್ಬರವೇತಕೆ ಡೈಮನ ಎಕ್ಕ,
ಅಂಕೆಯು ಗಂಟದು ನನಗೇನೂ ಸಿಕ್ಕ
ಆದರು ಹೇಳಿರಿ ನ್ಯಾಯದ ಮಾತ.
ಮಾತಿಗೆ ಅಂಜುವನಲ್ಲವು ಈತ.
ಅರಸನ ಸರಸಿಯ ಕಮಲವ ನಾನು
ಮೂಸಲು ಕಮಲವು ಕೆಡುವುದೆ ಏನು?

ಡೈಮನು ಗುಡಿಯು ದೇವರ ನಾನು
ಪೂಜಿಸೆ ಮೂರ್ತಿಯು ಒಡೆಯುವುದೇನು?
ಕಾನಲು ಯುದ್ಧಕೆ ನಡೆವರೆ ಮುಂಪೆ
ನಾಯುಪೆ ಅರಿಕುಲ, ಕುರಿಗಳ ಮಂದೆ.
ನೆಲವನು ಉತ್ತರೆ ಗುಲಾಮನಿವನು
ಬೀಜವು ಮೊಳೆಯದೆ; ಬೆಳೆ ಬರವೇನು?

**ಡೈ. ಒ:—** ಸೊಕ್ಕಿಹೆ ತುಂಬ ಗುಲಾಮ ನೀನು
ವೈ ಎಚ್ಚರ ಮರೆತೇ ಬಂದಿಹೆ ನೀನು!
ಅರಸನ ಸರಸಿಯ ಕಮಲವು ಬೇಕೇ?
ಡೈಮನ ಗುಡಿಯ ವಿಗ್ರಹ ಬೇಕೇ?
ಗುಲಾಮ ಮೂಸಲು ಕಮಲದ ಎಸಳು
ತಕ್ಷಣ ಬೂದಿಯು, ಮೂಗೇ ಫೈಸಲು!
ಡೈಮನ ಗುಡಿಯು ವಿಗ್ರಹ ಮುಟ್ಟಲು
ನಿಶ್ಚಯ ನಿನಗೆ ಮಣ್ಣಿನ ತೊಟ್ಟಿಲು.

(ತೆರಳುವನು)

**ಇ. ಗು:—** ಶಾಪವನಿಟ್ಟರು ಡೈಮನರಿವರು.
ಸಂಶಯ ಉಕ್ಕಿಸಿ ಸರಿದಿಹರು.
ಕಮಲದ ಎಸಳನು ಮೂಸಲು ಗುಲಾಮ
ಆಗುವುದೆಂದರು ಮೂಗೇ ಭಸ್ಮ!
ಸೆಗಣಿಯೊಳಿರಗುವ ಭ್ರಮರದ ಹುಳುವು
ಕಮಲದ ಎಸಳನು ಸೇರದೆಸೆ!
ಕಮಲವೆ ಹುಟ್ಟಿತು ಎಲ್ಲದು ಹೇಳಿ?
ನೀರಿನ ಕವಚವು, ಮೇಲಿಗೆ ಗಾಳಿ;
ಹುಟ್ಟಿನ ಮೂಲವೆ ಕಸರು ಕಾಳಿ!
ಮುಖದಲಿ ಮಾತ್ರ ಕೇಸರ ಧೂಳಿ!
ಬಲ್ಲವರೆಲ್ಲರು ಎನಗಿದ ಪೇಳಿ:
ಕಮಲದ ಹೂವಿಗೆ ಕಂಪು ಇದೆ
ಭ್ರಮರದ ಜೀವಕೆ ಮಿಡಿತವಿದೆ.

ಕಮಲಕೆ ಗೀತದ ಬಯಕೆಯಿದೆ.
ಭ್ರಮರಕೆ ನಾದದ ಲಹರಿಯಿದೆ.
ಎರಡಕು ಮೇಳದ ಯೋಗವಿದೆ.
ಇದಲ್ಲದ ಕಾರಣ—ಏನು ಇದೆ?

(ಅಲ್ಲಿಗೆ ಡೈಮನ ಕುವರಿಯು ಹಾಡುತ್ತ ಬರುವಳು.)

(ತೆರೆಯಲ್ಲಿ)

**ಡೈ. ಕು:**—ಭ್ರಮರಗಳಿಲ್ಲದ ನಾಡಿನಲಿ
ಅರುಳುವುದೇನ್ ಕಮಲ?
ತಿಮಿರವದಿಲ್ಲದ ಬಾನಿನಲಿ
ಉದಿಸುವುದೇನ್ ತಾರಾ?

**ಇ. ಗು:**— ಕಮಲದ ಭ್ರಮರದ ಉಪಮೆಯೊಳಿರಲು
ಅದುವೇ ಧ್ವನಿಯೊಳು ಹೊರಟಿದೆ ಕೊರಳು!
ಡೈಮನ ಕುವರಿಯು ಹೊರಟಿಹಳೆಲ್ಲಿಗೊ
ಹಾಡನು ಹೊಮ್ಮುತ ಅಲೆವುದದೆಲ್ಲಿಗೊ!

**ಡೈ. ಕು:**— (ಬರುತ್ತ) ಭ್ರಮರಗಳಿಲ್ಲದ ನಾಡಿನಲಿ
ಅರಳುವುದೇನ್ ಕಮಲ!
ತಿಮಿರವದಿಲ್ಲದ ನಾಡಿನಲಿ
ಉದಿಸುವುದೇನ್ ತಾರಾ?
ನಿಜಕು ಭ್ರಮೆಯೇ ನನಗೆ, ಭ್ರಮರದೆಣಿಕೆಯು ಬರಲು
ತೋರುತಿದೆ ರೂಪೊಂದು; ಭ್ರಮರ ಮಿರುವ ಬಣ್ಣ.
ಅಂಕೆ ಅಂಕುಶದೊಳಗೆ ಕೊಂಕುಗಟ್ಟಿತು ಜೀವ.
ಎಲ್ಲಿ ನೋಡಿದೊಡಲ್ಲಿ ಅಂಕೆಯಾಡುವ ಬಿಂಕ.
ಬೆಳಕು ಗಾಳಿಗು ಅಂಕೆ, ಸೊಗಸು, ಸವಿಗೂ ಅಂಕೆ
ಮೇಲೆ ಭೇದದ ಮುದ್ರೆ; ಒಳಗೆ ತಿಳಿವಿಗೆ ನಿದ್ರೆ.
ಇವನಿಗೂ ಮುದ್ರೆಯಿದೆ—ಎದೆಗೆ ಹಾರೆಯ ಮುದ್ರೆ.
ನನಗಿರುವ ಮುದ್ರೆಯನು ಕುಗ್ಗಿಸುತೆ ನಾನಿಂದು
ಅಲೆಯುತಿಹೆನಲ್ಲಲ್ಲಿ; ಕಲೆಯೊಂದು ಉಳಿದಿಹುದು.
ಯಾರಿರುವೆ ನೀ ಹೇಳು? ಯಾರ ಅರಮನೆ ನಿನಗೆ?

ಈ ಹಾರೆ ಗುರುತದುವೇನು? ನೀಗಂಡೊ ಹೆಣ್ಣೋ?
ಅಂಕೆ ಜಾಲಕೆ ಸಿಲುಕಿ ಬಂಧಿತನು ಆದವನೆ;
ಅಂಕೆ ಬಿಗುವನು ಮೀರಿ ಸ್ವೇಚ್ಛೆಯಾದವನೆ?

**ಇ. ಗು:**— ನಾನಂಕೆ ಘಾತಕೆ ಸಿಲುಕಿ ಟೊಂಕ ಮುರಿದವನು.

**ಡೈ. ಕು:**—ಅರಸು ಮಗ ನೀನೇನು? ಹೆಸರಿಟ್ಟು ಕರೆವರೇ?

**ಇ. ಗು:**— ನರಸು ಮೊಮ್ಮಗ ನಾನು; ಮನುಜನೆಂಬುದು ಹೆಸರು!

**ಡೈ. ಕು:**—ಮನುಜನೆಂಬುದು ಜಾತಿ; ಬೇರೇನು ಹೆಸರುಂಟು?

**ಇ. ಗು:**— ಇಸ್ಪೀಟು ಕುಲದೊಳಗೆ ಗುಲಾಮನೆನಿಸುವೆನು.

**ಡೈ. ಕು:**—'ಗುಲಾಮತನ'ಕಜ್ಜ; ಅದಕು ಮೀರಿದುದೇನು?

**ಇ. ಗು:**— ಯಾರ ಮೀರೆನು ನಾನು, ನನ್ನಿಂದ ಬೇಕೇನು?

**ಡೈ. ಕು:**—ನೀನೆಂದುದೆನಗರ್ಥವಾಗದೆಲೆ-'ಓ ನೀನೆ'
ನಾನೆಂದುದಕೆ ಅರ್ಥಪೇಳುವಿಯ ಏನೆ?
ಭ್ರಮರವು ಅಲೆಯದ ನಾಡಿನಲಿ
ಅರಳುವುದೇನ್ ಕಮಲ
ತಿಮಿರವು ಸುಳಿಯದ ನಾಡಿನಲಿ
ಉದಿಸುವುದೇನ್ ತಾರಾ?

**ಇ. ಗು:**— ಡೈಮನರ ಕುಲವಿಹುದು-'ಕಮಲ ಭ್ರಮರದ ಮಾತು!'
ನನ್ನ ಸಂಶಯ ಕಳೆಯೆ ದೊರೆಯುತಿದೆ ಅನುವಿನಿತು—
ನಿಮ್ಮ ಪ್ರಶ್ನೆಗೆ ಮೊದಲು ನನಗೆ ಸಲಿಸಿರಿ ಮಾತು.
ಸೆಗಣಿಯ ಮೂಸುವ ಹುಳುವೇ ಭ್ರಮರ—
ಕಮಲಕೆ ಏತಕೆ ಸಖ್ಯವು ಅದರ?

**ಡೈ. ಕು:**—ಸೆಗಣಿಯ ಸೇರಿದ ಭ್ರಮರವ ಕೇಳು;
ಭೃಂಗದ ಕುಲವದು ಒಂದೇ ಹೇಳು?
ಸುಗುಣಿಯ ಸ್ನೇಹವ ಮಾಡಿದ ಆಳು—
ಸೆಗಣಿಯೊಳ್ಮುಳುಗನು ವಿಚಾರ ತಾಳು!

**ಇ. ಗು:**— ಕಪ್ಪಿನ ಭೃಂಗಕೆ ಬಿಳುಪಿನ ಕಮಲವು
ಆಟಕೆ ಸೊಗವೇ ನಾ ತಿಳಿಯೆ.

**ಡೈ. ಕು:**— ಕಪ್ಪಿನ ಇರುಳಿಗೆ ಬಿಳುಪಿನ ತಿಂಗಳು

ಭೇಟಿಕೆ ಸಿಗನೇ ನೀ ಪೇಳು?

**ಇ. ಗು:**— ಕಪ್ಪೂ ಬಿಳುಪೂ ಒಪ್ಪಿಗೆಯಾದರೆ
ಅಪ್ಪಿಕೆ ಸ್ನೇಹವು ಕ್ಷಣಮಾತ್ರ.
ಮಧುವನು ಹೀರಿ ಹಾರಿದ ಕ್ಷಣಕೆ
ಕಂಬನಿಗೊಂಬುವು ಆ ನೇತ್ರ.

**ಡೈ. ಕು:**—ಇರುಳೂ ಹಗಲೂ ಚಂದ್ರಮ ಬೆಳಗಲು
ಬಯಸುತಲಿದ್ದೆವೆ ನಾವವನ.
ತಿಂಗಳಿಗೊಮ್ಮೆ ತುಂಬುವ ಮುನ್ನ
ಬಯಸುವೆವಯ್ಯ ಮುದ್ದಿನ ಚಿನ್ನ,
ಮಾತಿಗೆ ಮಾತು ಬೇಕಿಲ್ಲ ಎನಗೆ
ಬಲ್ಲೆಯ ನೀನು ಹೇಳೆನಗೆ—
ಭ್ರಮರವದಿಲ್ಲದ ನಾಡಿನಲಿ ಅರಳುವುದೇ ಕಮಲ
ತಿಮಿರವದಿಲ್ಲದ ನಾಡಿನಲಿ ಉದಿಸುವದೇ ತಾರಾ?

**ಇ. ಗು:**— ಗುಲಾಮನಿವನು ಬಲ್ಲಿದನಲ್ಲವು;
ನಿನ್ನೀ ಪ್ರಶ್ನೆಯು ಬಿಗುವಿನದು.
ಯಾರನು ಆದರು ಕೇಳುತೆ ಬರುವೆ
ಮುನ್ನವೆ ಉತ್ತರ ಪೇಳುವುದು!

(ತೆರಳುವನು.)

**ಡೈ. ಕು:**—ನನ್ನೀ ಪ್ರಶ್ನೆಯ ಯಾರೇನ್ ಅರಿವರು;
ಅರಿತಿರಲವರು ಭ್ರಮರಗಳೇ!
ಭ್ರಮರಗಳಾಗಿರೆ ನನ್ನನು ಸೇರರೆ?
ಸೇರಲು ಕಲೆಯದು ತಿಮಿರವದು?

(ತೆರಳುವನು.)

(ಡೈಮನ ಗುಲಾಮನು ಆ ದಾರಿಯಾಗಿ ಬರುವನು.)

**ಡೈ. ಗು:**— ಕೆಡುಗಾಲ ಬಂದಿಹುದು, ಅಲ್ಲದಿರೆ ಮಾತೇನು?
ಅವನೊಬ್ಬ ದುಡುಕಿದಕೆ, ಕುಪಿತರೀ ಅಂಕಿತರು.
ಎಕ್ಕ ಡೈಮನರೊಡನೆ, ವಾದವೆಸಗಿದನಂತೆ
ಇಸ್ಪೀಟು ಗುಲಾಮನವ-'ಅಂಕೆ ತಮಗೇಕಿಲ್ಲ.

ಅಂಕಿತರ ತುಳಿತವು ಸಲ್ಲ'-ಹೀಗೆಲ್ಲ ಅಂದನಂತೆ.
ನಾನಿಹೆನು ಗುಲಾಮು; ಎಲ್ಲರಂತಲ್ಲವದು.
ಮೇಲಿನವ; ಡೈಮನರ ಮನೆಯಾಳು; ಅರಿತಿಹೆನು.
ಆದರೇನ್! ಆದರೇನ್? ಮಾತು ಮೀರುವುದಲ್ಲ.
ಎದುರು ಆಡುವುದಲ್ಲ; ಹಿಂದಕೂ ಬೇಕಿಲ್ಲ!

**ಡೈ. ಹತ್ತು**:- (ಬರುತ್ತ)
ನಾನು ಬರುತಿಹೆನಯ್ಯ; ದೂರ ಸರಿಯುಲಿ ಕಾಯಿ.
ಅರಸು ಕುವರಿಯ ನೀನು ಕಂಡೆಯೇನಯ್ಯ?

**ಡೈ. ಗು**:— ಏನಾಯ್ತು ಅವರಿಂಗೆ; ಏನೊ ಹಲುಬುವರಂತೆ
ಮುರುಳುಗೊಂಡಿಹರಂತೆ; ಎತ್ತೆತ್ತೊ ಅಲೆವರಂತೆ!

**ಡೈ. ಹ**:— ಅದಕೆ ಅರಸುತಲಿಹೆನು, ಇನ್ನು ಕಾಣಿಸಲವಳು.
ಪಾಪವಲ್ಲವೆ ನೋಡು—ಸಮಕುಲದಿ ವರನಿಲ್ಲ!
ಹೆಚ್ಚೇಕೆ—ಎಲ್ಲೆಲ್ಲು ಗಂಡೆಂಬ ಹುಳುವೆ ಇಲ್ಲ.
ಅರಸರಾದುದಕಾಯ್ತು, ಅಂಕೆ ಸಡಿಲಿಸಬಹುದು.
ನಮ್ಮೊಳಗೋ! ಉಳಿವಿಲ್ಲ—ಎಂಟಕ್ಕೆ ಲಗ್ನದ ಅಂಕೆ.
ಯೋಚನೆಯು ಬೇಡೇನು? ವರನು ದೊರೆಯುವ ಮೊದಲು
ನೆರೆಯಬಾರದು ಎಂದು ಅರಿವಿಗೂ ತರಬೇಡವೇನು!
ಹರಿಹರೀ—ಕೇಳುವುದು ಮಾಪಾಪ, ಮಾಪಾಪ!

**ಡೈ. ಗು**:— ಗಂಡು ಹುಳುವಾದರೂ ಸಾಕಾಗುತಿತ್ತೆ?

**ಡೈ. ಹ**:— ಹುಲುಗಂಡನಾದರೂ ಕೊರತೆಯಿಲ್ಲಿತ್ತು.
ನೀ ಕಂಡೆಯೇನವಳ? ಅರಮನೆಯ ಆಳ್ ನೀನು
ಹೋಗಿ ಶೋಧಿಸು ಬೇಗ; ಅರಸು ಚಿಂತೆಯೊಳಿಹೆನು
(ತೆರಳುವನು.)

**ಇ. ಗು**:— (ಬರುತ್ತ)
ಭ್ರಮರವು ಇಲ್ಲದ ನಾಡಿನಲೀ
ಅರಳುವುದೇನ್ ಕಮಲ!
ತಿಮಿರವಖಿಲ್ಲದ ನಾಡಿನಲೀ
ಉದಿಸುವುದೇನ್ ತಾರಾ?

**ಡೈ. ಗು**:— ಪಂಡಿತರ ಕೆಣಕಿದನು ಇವನು, ನಮ್ಮವನಯ್ಯ

ಡೈಮನರ ಶಾಪದಿಂ ಮಂಕುಗೊಂಡಿಹೆನು!

**ಇ. ಗು:**— ಭ್ರಮರವು ಇಲ್ಲದ ನಾಡಿನಲಿ
ಅರಳುವುದೇನ್ ಕಮಲ?

**ಡೈ. ಗು:**— ಭ್ರಮರವೆಂಬುದು ಒಂದು ಗಂಡು ಹುಳುವಲ್ಲ!
ಅರಸು ಮಗಳಿಗೆ ಬೇಕು--ಅಂಥ ಹುಳುವೆಲ್ಲ!
ನೀನೇಕೆ ಅಳುತಿಹೆಯ ಗುಲಾಮು ಕಿರಿಯ,
ಗಂಡೆಂಬೆ ಹೆಣ್ಣೆಂಬೆ, ಮಾತೇಕೆ ಬರಿಯ?

**ಇ. ಗು:**— "ಅರಸು ಮಗಳಿಗೆ ಬೇಕು ಅಂಥ ಹುಳುವೆಲ್ಲ
ಗಂಡೇನು ಹೆಣ್ಣೇನು ಬರಿಯ ಮಾತಲ್ಲ."

**ಡೈ. ಗು:**—ನಿನಗೆ ಏತಕೆ ಚಿಂತೆ ತಮ್ಮ, ಹೇಳಲ್ಲ!

**ಇ. ಗು:**— "ಗಂಡೇನು ಹೆಣ್ಣೇನು ಬರಿಯ ಮಾತಲ್ಲ"
ಗಂಡಿಗಾಗಿಯೆ ಹೆಣ್ಣು ಹುಟ್ಟಲೇ ಇಲ್ಲ?

**ಡೈ. ಗು:**—ಹೆಣ್ಣಿಗಾಗುವ ಗಂಡು ಹುಟ್ಟಲೇ ಇಲ್ಲ;
ಗುಲಾಮುನೆಂಬವಗೆ ತಂಟೆ ಬೇಕಿಲ್ಲ.
ಗುಲಾಮನೆಂಬವನು ದಾಸ್ಯಕ್ಕೆ ಬೆರತು
ಆಯುಷ್ಯ ಕಳೆವವನು; ಸೊಗಕ್ಕೆ ಹೊರತು.

**ಇ. ಗು:**— ಹೆತ್ತರಂಕೆಗೆ ಇಂದು ತುಚ್ಛಿತನು ಆದವನು
ಸೊಗದ ಅಂಕೆಯನಿಂದು ಸಹಿಸಬೇಕೇನು?

**ಡೈ. ಗು:**—ಸಹಿಸದಿರೆ ಇನ್ನೇನು? ಗುಲಾಮಗಿಹುದೇನು?
ದಾಸ್ಯವೇ ಲಾಸ್ಯ; ಜಗಕೆ ಪರಿಹಾಸ್ಯ!

**ಇ. ಗು:**— ಒಪ್ಪದೀ ನುಡಿಯೆನಗೆ. ಪರಿಹಾಸ್ಯವಿನ್ನಿಲ್ಲ,
ಪರದಾಸ್ಯ ಮುನ್ನಿಲ್ಲ, ಸೊಗ ಲಾಸ್ಯವೇ, ಎಲ್ಲ.

**ಡೈ. ಗು:**—ಇನ್ನಾರೋ ಬರುತಿಹರು ನಿನ್ನ ಮಾತನು ಕೇಳಿ
ನನ್ನ ದೂಷಿಪರು, ನನಗೆ ತೃಪ್ತಿಯು ದಾಸ್ಯ.

**ಡೈ. ಕು:**—ಭ್ರಮರವದಿಲ್ಲದ ನಾಡಿನಲಿ ಅರಳುವುದೇನ್ ಕಮಲ,
ತಿಮಿರವದಿಲ್ಲದ ನಾಡಿನಲಿ ಉದಿಸುವುದೇನ್ ತಾರಾ.
ಪೇಳುವೆಯ ಈಗೆನಗೆ ನನ್ನ ಮಾತಿನ ಗೀತ?
ಭ್ರಮರವದಿಲ್ಲದ ನಾಡಿನಲಿ

ಅರಳುವುದೇನ್ ಕಮಲ

**ಇ. ಗು:**— ಭ್ರಮರವು ಅಲೆಯದ ನಾಡಿನಲಿ
ಅರಳುವುದೇನ್ ಕಮಲ?

**ಡೈ.** ಕು: —ಭ್ರಮರದ ಬರವನು ಕಾಯುತಲಿ
ಅರಳದೊ ಏನ್ ಕಮಲ?

**ಇ. ಗು:**— ಭ್ರಮರವು ಬಂದರೆ ಮಾತಿನಲಿ?
ತೋರುವುದೇನ್ 'ಅಮಲ'

**ಡೈ. ಕು:**—ಭ್ರಮರಕೆ ಅಮಲನು ಉಣಿಸುತಲಿ
ಮಣಿಯುವೆ ಏನ್—ವಿಮಲ?

**ಇ. ಗು:**— ಕಮಲವು ಮಣಿದರೆ, ಭ್ರಮರವು ಕುಣಿವುದು;
ಜಗವನು ಗೊಳಿಪುದು ಬೆರಗ.

[ಬಳಿ ಸೇರುವರು. ಆಗ ದೂರದಿಂದ ಡೈ. ರಾಜನೂ ರಾಣಿಯೂ ಬರುವರು. ಡೈಮನ ಕುವರಿಯು ಇ. ಗುಲಾಮನ ಕೈಯನ್ನು ಹಿಡಿಯುವಳು]

**ಡೈ. ರಾಣಿ:**-ನೋಡು ದೊರೆಯೇ ನೋಡು,
ಕೊನೆಗು ದೊರೆತಳು ಕುವರಿ!

**ಡೈ. ರಾಜ:**-ಕುವರಿಯವಳದು ದಿಟವು, ಯಾರವನು ಆ ಕರಿಯ?

**ಡೈ. ರಾ:**—ಗುಲಾಮನಿರಬೇಕು. ಇಸ್ಪೀಟು ಗುಲಾಮನಿರಬೇಕು.
ಏನಾಯ್ತು ಏನಾಯ್ತು! ಹೀನತನ ನಮಗಾಯ್ತು!

[ಕುವರಿಯೂ ಗುಲಾಮನೂ ಮುಂದುವರಿಯುವರು]

**ಡೈ. ಕು:**—ಆದುದೇನಿಲ್ಲ; ನಿಜಕು ಆದುದೇನಿಲ್ಲ.
ಸರಸಿಯ ತಡಿಯಲಿ ಭ್ರಮರವ ಕಾಣದೆ
ಕಮಲವು ಅರಸುತಲಿತ್ತು!

**ಇ. ಗು:**—ಕಮಲದ ಕರೆಯನು ಪ್ರತಿಧ್ವನಿಸಿತ್ತು
ಭ್ರಮರದ ಯಾವತ್ತು!

**ಡೈ. ರಾಜ:**-ಕಮಲದ ಬುಡವನೆ ಕಿತ್ತೇಬಿಟ್ಟಿತು
ಮದಕರಿ ಈ ಹೊತ್ತು!

**ಡೈ. ರಾಣಿ:**-ಅಂಕೆಯ ಮಾತನು ಕೇಳುವ ಮೊದಲೇ
ವಿಪತ್ತು ಕಲೆತಿತ್ತು!

**ಡೈ.** ರಾಜ:-ತಡಿ, ತಡಿ, ಡೈಮನು ಬಂದೇ ಬಂದನು
ಬಿಡಿಸಲಿ ಈ ಕುತ್ತು.
ಡೈಮನ ಹತ್ತು; ನೋಡಿರಿ ಅಲ್ಲಿ
ವಿಧಿಯೊಳಗೇನಿತ್ತು

**ಡೈ. ಹ:—** ಗುಲಾಮನೆಂಬವ ಕುವರಿಯ ಸೇರಲು
ಲಲಾಮನಾಪನು, ಇನ್ನೇನು!
ಆಗುವ ತನಕ ಅಂಕೆಯ ಬಿಗುವು,
ಆದರೆ, ಮರುಕ್ಷಣ ನಗುವು!
ಸತ್ಯವನುಸುರುವೆ ಇಷ್ಟದು ನಿಶ್ಚಯ—
ಎಲ್ಲವು ಬೊಮ್ಮನ ಬರಹ.
ಅಂಕೆಯ ಗುಟ್ಟು, ಗುಟ್ಟಿನ ರಟ್ಟು,
ಅವನೆ ಸಲಿಸುವ ವರಹ



# ಪಾತ್ರ ಪರಿಚಯ

[ವಿಶಾಲವಾದ ರಂಗಭೂಮಿ. ನೆಲನ ವಿಸ್ತಾರವು ಕಾಣಿಸುವ ಮಾದರಿಯಲ್ಲಿ, ಬಹುದೂರದ ತನಕ ಹಿನ್ನೆಲೆಯು ನೋಟ ಮೂಡಿದೆ.]

**ಅಮರ:—** ಮಾನವನ ಅನಂತ ಜೀವನವನ್ನು ಸೂಚಿಸುವ ಚಿರಂಜೀವಿ ವ್ಯಕ್ತಿ.

**ಅಬಲೆ:—** ಮಾನವನ ಮನೋದೌರ್ಬಲ್ಯ, ಭೀತಿಗಳ ಸಂಕೇತಳೆನಿಸಿದವಳು. ಅಮರನ ತಂಗಿ; ಜತೆಯಲ್ಲಿ ಬೆಳೆದು ಕೆಲವು ಕಾಲ ಕಣ್ಮರೆಯಾಗಿದ್ದವಳು.

**ಪೂಜಾರಿ:--** ಮಾನವನ ಮನೋ ದೌರ್ಬಲ್ಯದ ಮೇಲೆ ದೇವರ ವ್ಯಾಪಾರಕ್ಕಾಗಿ ನಿಂತ ವ್ಯಕ್ತಿ.

**ಶಿಲ್ಪಿ.—** ಮಾನವನ ಯಾವತ್ತು ಬಯಕೆ ಆಶಯಗಳನ್ನು ಮೂರ್ತಿಯಾಗಿ ಕೆತ್ತುವ ಯುಗ ಶಿಲ್ಪಿ.

**ಇಂದ್ರ:—** ವೈದಿಕ ಯುಗದ ದೇವತೆ

**ಯಮ:—** " "

**ವಿಷ್ಣು:—** " "

**ಐರಿಸ್, ಎನಿಬಿಸ್, ಟೈಫೂನು—**
ಹಳೆಯ ಕಾಲದ ಐಗುಪ್ತ ದೇವತೆಗಳು. ಭಕ್ತಜನರು, ವಿದ್ಯಾರ್ಥಿ........



## ಅಂಕ ೧.

[ಬಯಲು ಗಾವಲೊಂದರಲ್ಲಿ ಅರ್ಧ ಒರಗಿಕೊಂಡು, ತೂರಾಡುವ ಹೂ ಗಿಡಗಳೊಡನೆ ನಲಿಯುತ್ತಿರುವ ಅಮರ.]

**ಅಮರ:—** ಎಳೆಯ ಸಸುಗಾಳಿಯಿದು! ಎಷ್ಟು ಮುದದಿಂದೆನ್ನ
ಮುಂಗುರುಲ ಕುಣಿಸುತಲಿ ತಾ ನಲಿಯುತಿಹುದು!
ಬಿಸಿಲ ಬೇಗೆಯಿಂ ನೊಂದ ಅಂಗಾಂಗಗಳಿಗಿಂದು
ಚಂದದುಪಚಾರವನೆ ಎಸಗಿ ಸಂತೈಸುತಿದೆ.
ಯಾರಿಲ್ಲದೆನಗಿಂದು ಈ ಗಾಳಿಯಲ್ಲವೆ ಗೆಳತಿ!
ಅಕ್ಕರೆಯ ಕಿರಿ ತಂಗಿ ತಾನೊಂದು ದಿನ ಬಂದು
ಮರುಪೊಂದು ಗಳಿಗೆಯಲಿ ಕಳೆದು ಹೋದಳು ಏಕೊ!
ಅಂದು ಕಳಚಿದ ತನುಜೆ, ಗಾಳಿದೇಹವ ತಾಳಿ
ಆಗಾಗ ಬರುವಳೋ ಎಂದು ಕಾಣಿಸುತಿಹುದು;
ಕಣ್ಣು ಬಿಗಿಯುವಳೊಮ್ಮೆ ತಾನು ಮರೆಯಾಗಿದ್ದು!
ಮೈಯ ಸವರುತಲೊಮ್ಮೆ ಮಾಯವಾಗುವಳಲ್ಲ!
ಜೀವನದ ಬೇಗೆಯಲಿ ಬೆಂದು ನರಳಿದ ಚಣದೆ
ಎಳೆ ಚಿಗುರ ಕೈಯಿಂದ ತಂಬೆಲರ ನಲುಬೀಸಿ
ಬೆಟ್ಟದಾ ಮರೆಯಿಂದ ನಸುನಕ್ಕು ನಗಿಸುವಳು!
ನಾಲ್ದೆಸೆಯ ಎಳೆಗಾಳಿ, ನೀನೆನ್ನ ನಿಜಗೆಳತಿ;
ನೀನಿಹೆಯು ಎಲ್ಲೇನೊ! ನೀ ಬರುವೆ ಎಂದೇನೊ!
ನೀ ಸರಿವೆ ಎಂತೇನೊ—ಆದರೇನ್, ಆದರೇನ್?
ಈ ಮನವು ನೊಂದಾಗ ನೀ ಬಂದೆ ಬರುತಿಹೆಯು
ನಾ ಒಂಟಿ ಎಂದಾಗ, ನೀನಿದ್ದೆ ಇರುತಿಹೆಯು.
ಬಂದು ಮೈದಡವುತ್ತೆ ಅಪ್ಪಿ ಮುದ್ದಿಕ್ಕುತ್ತೆ
ಮಾಯವಾಪೆ....

[ಅಷ್ಟರಲ್ಲಿ ಮೆಲುಗಾಳಿಯೇ ಬಿರುಗಾಳಿಯಂತೆ ಬಲವಾಗಿ ಸದ್ದೆಬ್ಬಿಸಿ ಉರುಳತೊಡಗುವುದು.]

ಉಕ್ಕುವೆಯ? ಉರುಳುವೆಯ? ಇಂತೇಕೆ ಎಲರ ದೊರೆ
ಬಾಳ್ವೆಯುಯ್ಯಾಲೆಯದು ಹರಿವಂತೆ, ಮುರಿವಂತೆ
ತೀಡುವೆಯ, ಕಾಡುವೆಯ—

[ಮೇಲೆದ್ದು ಬಾನನ್ನು ನೋಡುವನು]

ಮುಗಿಲ ಹಂಸದ ಕೂಟ, ನೀಲ ಮಾನಸವೀಸಿ
ಏನು ಒನಪಿನಿಂದತ್ತ ಸಾಗುತಿದೆ ಭರದಲ್ಲಿ
ಒಂದಲ್ಲ ಎರಡಲ್ಲ—ಸರಸೆ ತುಂಬಿಹುದಲ್ಲ!

[ಬೆಳ್ಮುಗಿಲು ಕಪ್ಪೊಡೆಯುತ್ತ ಬರುವುದನ್ನು ಕಂಡು]

ಹಂಸದಂತಿಲ್ಲೀಗ; ಕಾಯ ಹಿರಿತನವೆತ್ತಿ
ಬಿಳಿತನವೆ ಬರಿದಾಯ್ತು. ಇರುಳೆ ಮೈವೆತ್ತಂತಿಹುದು!
ಬರಿಗಾಳಿ ಬಲುಕೊಬ್ಬಿ ಬಿರುಗಾಳಿಯಾಯ್ತು!
ಕಾರ್ಮುಗಿಲ ಕೆರಳಿಸುತೆ ಬಲು ರೌದ್ರವಾಯ್ತು;
ಮುಗಿಲನುರುಳಿಸುವಂತೆ ನನ್ನ ಹೊರಳಿಪೆಯೇನು?

[ಗುಡುಗು ಸಿಡಿಲು ಮಿಂಚುಗಳೇಳುವುವು]

ಅಬ್ಬ, ಮರುತನ ಚೇಷ್ಟೆ! ಒಳ್ಳೆ ಸರಸದ ಆಟ—
ಬಾನ ಕಡೆಯುವೆಯೇನು? ಕೋರೆಮಸೆಯುವೆಯೇನು!
ಕಾರಿರುಳ ಕೊರಳಿಂಗೆ ಮಿಂಚು ಬಳ್ಳಿಯ ತೊಡಿಸಿ
ವಿಕಟ ನಗುವಿನ ಗಾನ ಹೊರಳಿಸುತೆ ಕುಣಿಯುವೆಯ?

[ಸೃಷ್ಟಿಯ ಈ ರೌದ್ರವನ್ನು ಕಂಡು ಯಾವುದೋ ಜೀವಿಯೊಂದು ಬೆದರಿ ಚೀರುತ್ತಿರುವಂತೆ ಕೇಳಿಸುವುದು]

[ಬಿರುಗಾಳಿ, ಮಳೆ, ಸಿಡಿಲುಗಳ ಭರವೇರುವುದು. ಯಾವಳೋ ಒಬ್ಬ ತರುಣಿ ಭೀತಿಯಿಂದೋಡಿ ಅಮರನ ಬಳಿಗೆ ಬಂದು ಸೇರುವಳು]

ಬಾ ತಂಗಿ, ಬಾ ಬಳಿಗೆ—ಏಕೆ ಬೆದರುವೆಯಿಂತು?
ಸಾಕು ಸಾಕೆಲೊ ಮರುತ, ನಿನ್ನ ಚೇಷ್ಟೆಯ ತಡೆಯೆ,
ನೋಡಿವಳ—ಕುಟಿಲ ಕ್ರೌರ್ಯಗಳನ್ನು ಅರಿಯಳಿವಳು
ನಿನ್ನ ಉಕ್ಕಿಗೆ ಬೆದರಿ, ಕಕ್ಕುಲತೆ ಗೊಂಡಿಹಳು.

[ಅವಳನ್ನು ಆದರಿಸಿ ಹಿಡಿಯುವನು]

**ಅಬಲೆ:—** ಕರವ ಸಡಲಿಸ ಬೇಡ, ಕಾಯ ಕಂಪಿಸುತಿಹುದು.
ಬಳಿಯೊಳಗೆ ಗವಿಯಿರಲು, ಅಡಗಿಕುಳಿತಿರುತಿದ್ದೆ;
ಸಿಡಿಲಿನಬ್ಬರವಿದಕೆ ಎದೆಯೆಲುಬುಗಳು ಅದುರಿ
ಪುಡಿಯಾಪ ತೆರನಿಹುದು; ಮಿಂಚುಮೊನೆಗಳು ಕಣ್ಣ
ಸೀಳಿ ಕುಕ್ಕುತಲಿಹವು; ಗಾಳಿಯೊದೆತಕೆ ನೆಲವೆ
ಅದುರಿ ಸಿಡಿವಂದದಲಿ—ಪ್ರಳಯವೇ ಉಕ್ಕುತಿಹುದು.

**ಅಮರ:—** ವಾಯುವ್ಯದರಮನೆಯ ಎಲರದೊರೆ ಕೇಳಿಲ್ಲಿ—
ನನ್ನಸುವು ತಡೆದಂತೆ ನಿನ್ನೊಯ್ಲ ಭರವಿದನು
ಎಳೆಯುಸಿರುಗಳು ಎಂದು ತಡೆಯಲಾರವು ನಿಜದಿ;
ನಿನ್ನೋಟ ಮಾಟಗಳ ಕಂಡು ಅಂಜುವಳೀಕೆ;
ಹೆಣ್ಣಿವಳು ಮಿಗನಯನೆ; ಈಗಂತು ಬೆದರುಜೀವಿ!
ಇವಳೊಳೇತಕೆ ಗಡಸು, ತೋರಲೇತಕೆ ಬಿರುಸು?
ಕರುಣೆ ಬಿತ್ತುವ ಹೊಲದಿ ಮರಣ ಸೂಸುವೆಯ!
ಮೆಲುವಾಗಿ ನುಡಿದು ಬಾ, ಚೆಲುವಾಗಿ ನಡೆದು ಬಾ,
ನಿನ್ನೆಳಮೆ, ಕಂಪುಗಳ ಸೂಸಿ ಬಾ, ಹಾಸಿ ಬಾ,
ಈ ಓಟ ನಿನಗಲ್ಲ, ಈ ಕಠಿಣ ಚೆಲುವಲ್ಲ
ಮಣಿದು ಬೇಡುತಲಿಹೆನು—ತಣಿದು ಹರಸುವುದಯ್ಯ.

[ಬಿರುಗಾಳಿಯು ಶಾಂತವಾಗಿ ತಿರುಗಿ ಮೊದಲಿನ ತಂಬೆಲರು ಬೀಸುವುದು]

ನೋಡವ್ವ—ಅವ ನಾನು ಎಂದಂತೆ ಇಹನು . . .

**ಅಬಲೆ:—** ಅವ—ಅವ ಬಂದನೇನು?
ಗುಡ್ಡಗಳನು ಬಿರಿದಾತ, ಮರಗಳನು ಮುರಿದಾತ
ಕಿಚ್ಚುಗೋಲುಗಳಿಂದ ಆಡಿದಾತ—
ಅವ . . . ಅವ ಬಂದನೇನು!

**ಅಮರ:—** ಹಾಗಲ್ಲ, ನಾನೆಂದೆ—ರೌದ್ರ ತಣಿದಿಹುದೆಂದು.
ಸಿಡಿಲು ಅಡಗಿತು ನೋಡು; ಮುಗಿಲು ಚೆದರಿತು ನೋಡು,
ತಂಬೆಲರು ಮೋಹಮಯ ಲಾಸ್ಯವೆಸಗುತಲಿಹುದು

**ಅಬಲೆ:—** ಚೆದರಿತೇನ್ ಕಾರ್ಮುಗಿಲು—ಚೆದರಲಿಲ್ಲವು ಅಣ್ಣ.
ದೂರಸರಿಯುತೆ ತಾನು ಹೊಂಚಿ ಇಣಕುತಲಿಹುದು!
ಮುಗಿಲ ಹಿಂದಕೆ ಬೇರೆ ಘೋರವಿದ್ದಂತಿಹುದು,

**ಅಮರ:—** ಏಕೆ ಬೆದರುವೆ ತಂಗಿ ಇಲ್ಲದುದ ನೆನೆಯುತ್ತೆ
ಮುಗಿಲ ಹಿಂದಿನ ಮಿನುಗು, ತಾರೆಗಳ ಉದಯ ಕಳೆ.
ಸಂಜೆ ಸರಿದುದರಿಂದ ಬಾನಿಗೊಡೆಯರು ಅವರು.
ಇರಲಿರಲಿ—ನೀನಾರು? ನಿನ್ನ ಕಂಡಂತಿಹುದು.
ಎಂದೇನೋ ಕರಯುಗವ ಮುದದಿ ಪಿಡಿದಂತಿಹುದು?
ಯಾರುನೀ; ಎಲ್ಲಿತಾವ್?

**ಅಬಲೆ:—** ಪೇಳುವೊಡೆ ನುಡಿಗಳನು ನಂಬಲಂಜಿಕೆಯಕ್ಕು.
'ನಾನಾರೆ?' ನಾನಬಲೆ, ಹೋಕು ಹೊಕ್ಕಿಲ್ಲದವಳು.
ಎಷ್ಟು ದಿನ ಸಂದುವೋ—ಅಲೆದು ದಣಿವುದರಲ್ಲಿ;
ಈ ಗುಡುಗು, ಈ ಮಿಂಚು, ಬಿರುಗಾಳಿ, ಬೆಂಕಿಗಳ
ಕಂಡು ಭೀತಿಗೆ ಬಲಿಯು; ನರಳಿ ಚರಿಸುತಲಿಹೆನು;
ಪಾರುಗೈಯ್ಯುವರಾರೊ ದಾರಿಗಾಣೆ, ದಾರಿಗಾಣೆ!

**ಅಮರ:—** ಹಿಂದೆಲ್ಲಿ ವಾಸವಿದ್ದೆ ಅಂಜಿಕೆಯ ಅವತಾರ?

**ಅಬಲೆ:—** ಹಿಂದೆಯೂ ಇಂತೆ ಇದ್ದೆ . . .

**ಅಮರ:—** ತಂದೆ ತಾಯ್ಗಳು ಇಲ್ಲ? ಅಣ್ಣತಂಗಿಯರಿಲ್ಲ
ಮನೆಮಠಗಳೇನಿಲ್ಲ—ಬಂಧು ಬಳಗ?....

**ಅಬಲೆ:—** ಯಾವೊಂದು ಕಡೆ ಇಲ್ಲ, ನೆಲಸುವೊಡೆ ನೆಲವಿಲ್ಲ
ನನಗೆ ನಾನೆಂತಾದೆ ಎಂಬಚ್ಚರಿಯು ಕೆರಳುತಿದೆ
ನಿನ್ನ ಕಂಡೀಕ್ಷಣಕೆ ಸ್ನೇಹದಾಸೆಯು ಉದಿಸಿ
ನಿನ್ನ ಹಿಂದನು ತಿಳಿಯೆ, ಬಯಕೆಗೊಂಡಿದೆ ಮನವು

**ಅಮರ:—** ನಾನೇ?
ಹಿಂದಿನಿಂ ಈ ವನದಿ ಅಲೆದು ಚರಿಸುತಲಿದ್ದೆ
ತನುಜೆಯೊಬ್ಬಳ ಕೂಡಿ ಚೆಲುವಿನೊಳ್ನಲಿಯುತಿದ್ದೆ
ಆದಕು ಹಿಂದೊಂದು ದಿನ ತಾಯ್ತಂದೆಯರ ಸೇರಿ.

(ಏನನೋ ನೆನೆದು ಅವಳನ್ನೂ ಕಂಡು ನೆನಹು ಕೆದರಿ)

ಇರುಳೊಂದು ದಿನ ಮಲಗಿ ತಿರುಗಿ ಏಳದೆ ಪೋದ
ಮಲಗಿದನು; ಮಲಗಿದನು; ಕೊನೆಯಿಲ್ಲದಿಹ ನಿದ್ರೆ
'ಆವುದೋ ಕನಸಿನೊಳು ಮೋಹಗೊಂಡಂತಿತ್ತು
ಮೋಹನದ ಆಟದಿಂ ತಾನೇಳದಂತಾಯ್ತು.
ಆ ತಾಯಿ—ಇದರಂತೆ ಬಾಳ್ವೆಯಿಂ ತೇಲಿದಳು.
ಎಳೆತನದಿ ಈ ಎನ್ನ ಊಡಿಸಿದ ಮಾತಾಯಿ
ಬೇರೊಂದು ದಿನ ಸೊಗದ ನಿದ್ದೆ ಜಾಲಕೆ ಸಿಲುಕಿ
ಏಳದೆಯೆ ಪೋದಳ್ಳೆ—ಸ್ಮರಣೆಯೇ ಗತಿಯಾಯ್ತು

**ಅಬಲೆ**:— ಆ ತಂಗಿ?

**ಅಮರ**:— ಕೇಡಾಯ್ತು
ಉಳಿದಿಬ್ಬರೇ ನಾವು ವನವ ಚರಿಸುತಲಿದ್ದು
ಹಸು ಹಕ್ಕಿಗಳ ಕಂಡು ನಲಿದು ಪಾಡುತಲಿರಲು
ಹಳೆ ನೋವುಗಳ ಮರೆಯೆ, ಹೊಸ ಸೊಗಸುಗಳ ಹೆಣೆಯೆ;
ನದಿದಂಡೆಯೊಳಗೊಂದು ದಿನ ಕುಳಿತು ಇದ್ದಂತೆ—
ಉಕ್ಕಿ ಬಂದಿತು ನೀರು, ಕೊಚ್ಚಿ ಒಯ್ದಿತು ಅವಳ.
ಈಗಿರುವೆನೇಕಾಕಿ....ಇಲ್ಲಿಲ್ಲ ಈ ವಾಯುವ್ಯದೆಳ ಮರಿಯು

**ಅಬಲೆ**:— ವಾಯುವ್ಯದೆಳಮರಿಯು

**ಅಮರ**:— ಗೆಳೆಯ ಮಾರುತರಾಯ, ಬೀಸಿ ನಗುತಿಪನಲ್ಲ
ಅವನ ಬಿಟ್ಟೆನಗನ್ಯ ಗೆಣೆಯರಿಲ್ಲ....

**ಅಬಲೆ**:— ನೋಡಣ್ಣ, ನಿನ್ನಕತೆ ಹಿಂದಣದ ಕನಸೊಂದ
ಎಚ್ಚರಿಸುತಿಹುದಲ್ಲ; ನೀರಸುಳಿಯುಲಿ ಸುತ್ತಿ
ಭ್ರಮೆಯನೊರೆಯುಲಿ ತೇಲಿ, ಎಲ್ಲೊ ದಂಡೆಯ ಸೇರಿ
ಹುಟ್ಟಿಬಂದಂತಿಹುದು—ಹಗಲುಗನಸಿನ ಹುಚ್ಚು
ಬಲುವಾಗಿ ಕಾಡುತಿದೆ—ಅರ್ಥವಾಗದೆ ಇತ್ತು,
ಹುಚ್ಚು ಕನಸಲ್ಲೇನು? ಎಚ್ಚರದ ಸತ್ಯವೇ?

**ಅಮರ**:— ಎಚ್ಚರದ ಸತ್ಯವಿದು—ಅಂದಗಲಿ ಪೋದವಳು
ಇಂದು ಬಂದಪೆ ತಾನೆ! ತಂದು ಕೆಡೆದುದು ಗಾಳಿ
ನೀರು ಬೇರಾಗಿಸಿತು; ಗಾಳಿ ಮರು ಸೇರಿಸಿತು

ಆದರೇನಿದು ತಂಗಿ? ಎದೆಯೊಳಗನೀ ನಡುಕು?
ಗಾಳಿ ಮಳೆಯೊಳು ನೀನು ಆಡಿ ದಣಿದವಳಲ್ಲೆ?
ಇಂದು ಗುಡುಗಿನ ದನಿಗೆ ಬೆದರಿ ಬೆಚ್ಚುವೆಯೇಕೆ!

[ಯಾವನೋ ಒಬ್ಬ ಪೂಜಾರಿಯು ಮುಗಿಲಿಗೆ ಮುಖ ಮಾಡಿಕೊಂಡು, ಆಗಮಿಸುವನು.]

**ಪೂಜಾರಿ:**— ಕರದಿ ವಜ್ರವ ಪಿಡಿದು, ಬಾನ ಕಡೆಯುತಲಿರುವ
ಓ ದೇವಾಧಿದೇವ, ಕರುಣೆದೋರು.
ಅಬಲರ್ಕೈ ಮಾನವರು, ದುರ್ಬಲರು ಜೀವಿಗಳು
ಧರೆಯ ಹುಳುಗಳ ಮುಂದೆ ನಿನ್ನುಗ್ರವೇ?
ಬಡಪಾಯಿಗಳು ನಾವು, ಶಕ್ತಿಯುಕ್ತಿಗಳಿಲ್ಲ
ಭಕ್ತಿಯೊಂದಿಹುದಯ್ಯ ಮಣಿವೆವಯ್ಯ,
ಗುಡುಗು ಮಿಂಚನು ಕರೆದು ಗಡಗುಡಿಪುದೇಕೆಮ್ಮ,
ಯಜ್ಞ ಮುಖದಲಿ ನಿನಗೆ ಹವ್ಯವೀವೆ.
ಕಾಲಕಾಲಕೆ ದೇವ, ಮಳೆ ಗಾಳಿಗಳ ಕಳುಹಿ
ಕ್ಷಮೆ ಕ್ಷೇಮಗಳನಿಷ್ಟೆ ಪಾಲಿಸಯ್ಯ,

**ಅಮರ:**— ಯಾರು ನೀ? ಯಾರೊಡನೆ ಸಲ್ಲಾಪ?

**ಪೂಜಾರಿ:**—ಅರಿಯೆಯಾ ನೀಯೆನ್ನ? ಯುಗದ ಪೂಜಾರ್ಯನಾ,
ಮುಗಿಲದೊರೆ ಇಂದ್ರನನು ಬೇಡಿ ತಣಿಸುತಲಿಹೆನು

**ಅಮರ:**— ಇಂದ್ರನನು? ಯಾರವನು?

**ಪೂಜಾರಿ:**—ಕಂಡಿಲ್ಲವೇನವನ? ಬಾನಲ್ಲಿ ಈ ಸಂಜೆ
ಏಳು ಬಣ್ಣದ ಬಿಲ್ಲ ಬಿಡಿಸಿ ನಿಂದಾ ನೋಟ!
ಪಾಪಿಗಳನಂಜಿಸಲು ಬಾನ ಕೆರಳಿದ ಆಟ!
ವಜ್ರವನು ಕಟಿಕಟಿದು ನೆಲನೆ ಬಾಯ್ದೆರೆವಂತೆ
ಬರೆಸಿಡಿಲನೆರಗಿಸುತೆ ಕೆಚ್ಚೆದೆಯಕರಗಿಸುತೆ
ಎಂಟು ದಿಸೆಗಳ ಸೀಳಿ, ರೌದ್ರ ರೂಪವ ತಾಳಿ....

**ಅಮರ:**— ಈ ಸಂಜೆ! ಇಂದ್ರನನು? ಕಂಡುದೇ ಇಂದ್ರಧನು?
ಈ ಸಂಜೆ ಆದುದೇನು? ನಾನೇನು ತಿಳಿಯೆನೇ?
ತಂಬೆಲರೆ ತುಸು ಹೆಚ್ಚಿ ಬಿಗುಪಿನಿಂ ಬೀಸಿತ್ತು;

ಅಂಬರದ ಕಾಳ್ಕ್ರಿಗೆ ಚಂಚಲೆಯು ಸೆರಗಾಯ್ತು
ತುಂಬ ಸೊಗಸಿನ ನೋಟ—ಏನಾಯ್ತು ಅದರಿಂದ?

**ಪೂಜಾರಿ:--** ತುಂಬ ಸೊಗಸಿನ ನೋಟ; ಏನಾಯ್ತು ಅದರಿಂದ!
ಅದುವೆ ಇಂದ್ರನ ಮಾಟ; ಉಗ್ರತೆಯ ಕಡೆನೋಟ!
ಭಕ್ತಿಯಿಂ ಗೋಳಿಟ್ಟು—ಇಳೆಯ ಕಾಪಾಡೆಂದೆ;
ಆತನನು ಮರೆಹೊಕ್ಕೆ; ಮಣಿದು ಕಂಬನಿಗರೆದೆ.
ಶರಣು ಪೋದುದಕಾಯ್ತು—ಇಲ್ಲದಿರೆ, ಉರೆ ಸೊಕ್ಕಿ
ವಜ್ರವನು ತಿರುವುತ್ತೆ ಗಿರಿಮರವ, ನರಕುಲವ,
ನನ್ನ, ನಿನ್ನನು, ಎಲ್ಲ—ಭಸ್ಮವೆಬ್ಬಿಸಿ ಬಿಡಲು
ಬಾನ ದೊರೆ ಇಂದ್ರಂಗೆ ಯಾವ ಬಲುಹಿನ ಕೆಲಸ?

**ಅಬಲೆ:—** ಇಂದ್ರನೆಂಬವನೊಬ್ಬ ಗೈದನೇನಿದನು?
ಎನ್ನ ಎದೆಗಾರಿಕೆಯು ಮುದುರಿ ಮುರುಟಾಗಿತ್ತು,
ಪೂಜೆಯನು ಸಲಿಸುತಲಿ ನೀ ಕಾಯ್ದೆ ನಮ್ಮನ್ನು

**ಪೂಜಾರಿ:--** ನಿಜತಂಗಿ, ನಾ ಕಾಯ್ದುದಕಾಯ್ತು; ಇಲ್ಲದಿರೆ
ಹಿರಿಯ ದೇವರ ಮುಂದೆ ಹುಲು ಮನುಜನೆಷ್ಟರವ
ಆ ಅಗ್ನಿ, ಆ ಯಮನು, ಟ್ವೈಷ್ಟ್ರನು, ಐರಿಸರು—
ಎಲ್ಲ ದಿಸೆಗಳ ದೇವ, ಮೃತ್ಯು ದೊರೆ ಯಮರಾಯ—
ಇವರೆಲ್ಲರಿದಿರಿನಲಿ ಮಾನವನು ಮಣಿಯದಿರೆ!

**ಅಮರ:—** ಎಲ್ಲವೂ ಹೊಸಬಗೆಯೆ!
ನಾನಾವ ದೇವರನು ಕಂಡವನೆ ಅಲ್ಲ
ಯಾರೇನು ಬಂದೆನ್ನ ಕೆಣಕಲಿಲ್ಲ.

**ಪೂಜಾರಿ:-** ಹಿರಿಯ ದೇವರು ಅವರು, ಹುಳುವ ಹೆಕ್ಕುವರೇನು?

**ಅಮರ:—** ನೋಡಾರ್ಯ
ವಾಯುವೊಬ್ಬನ ಬಲ್ಲೆ; ಗೆಳೆಯನಂತಿಹನಾತ
ದೇವರಿರುವೊಡೆ ನಿಜಕು ವಾಯುವಂತಿರಬೇಕು.
ಕಾಣೆದೆಯೆ ಕರೆದಾಗ ಬಂದು ಪ್ರೀತಿಸಬೇಕು.

**ಪೂಜಾರಿ:-** ಎಲೆ ಮರುಳೆ! ನೀನ್ ಅರಿಯೆ! ನಿನ್ನ ಮೆಚ್ಚಿನ ವಾಯು
ಇಂದ್ರನಡಿಯಾಳಯ್ಯ; ಅವನೊಬ್ಬನೇ ಏನು!

ಅಗ್ನಿ ಯಮ ನೈಋತಿಗಳಿನ್ನು ಸಾಲ್ಕರಿಂದಿಗಳು
ಇಂದ್ರನೆಂಬಂತಿಹರು; ಅವಗೆ ತಲೆವಾಗುವರು;
ಇಂದ್ರನೇ ಅಧಿಪತಿಯು ಅಮರ ಲೋಕವದಕ್ಕೆ

**ಅಮರ:—** ಅಮರಲೋಕವದಕ್ಕೆ!

**ಪೂಜಾರಿ:-** ನೋಡಾಚೆ ಮೂಡಣವ, ಅಂಬರದ ಅಂಚನ್ನು,
ಅಲ್ಲಿನಿಂದಾಚೆಗಿದೆ ಇಂದ್ರನಮರಾವತಿಯು
ಸ್ವರ್ಗವೆಂಬರು ಅದಕೆ—ಸುಖ ಸೊಗಸುಗಳ ನಾಡು
ಗಂಧರ್ವ ಕಿಂಪುರುಷ ಕಿನ್ನರಾದ್ಯರ ಬೀಡು,
ಯೋಗವೆಸಗಿದರೆಲ್ಲ ಪೋಗಿ ಸೇರುವ ನಾಡು.

**ಅಮರ:—** ಇಂದ್ರನಿಹ ಸ್ವರ್ಗದೊಳು ಅಷ್ಟೆಲ್ಲ ಇಹುದೇ?

**ಪೂಜಾರಿ:--** ಇಹುದಿಹುದು ತಾನಲ್ಲಿ ಅದಕು ಮಿೂರಿದ ಸೊಬಗು.
ಬೇರೊಂದು ತಾವುಂಟು—ನೋಡಲ್ಲಿ ದಕ್ಷಿಣವ,
ತೆಂಕಣದ ತುತ್ತುದಿಯ ತಾಣವೇ ನರಕವದು.
ಯಮನೆಂಬ ದೇವತೆಯೆ ಅಲ್ಲಿನೊಡೆತನಕಿಹನು
ದೇವರನು ನಂಬದಿರೆ, ಪೂಜೆಗಳನು ನಡೆಸದಿರೆ
ಆ ಯಮನ ಬಳಿಗೊಯ್ದು, ಅಗ್ನಿ ಕುಂಡದಿ ಬಿಸುಟು,
ಕುದಿವ ತೈಲದೊಳದ್ದಿ, ಹಾವುಗಳ ಬಾಯ್ಗೊಡ್ಡಿ....

**ಅಬಲೆ:—** ಸಿಲಿಸುವೆಯ ಆ ಮಾತ. ನಿನ್ನ ಬಣ್ಣನೆಯಿಂದ
ಎದೆ ನಡುಗುತಿದೆ ನಿಜದಿ; ಆ ರಾಜ್ಯ ನಾನೊಲ್ಲೆ

**ಪೂಜಾರಿ:--** ಗರಗಸದಿ ಸಿಗಿಸಿಗಿದು, ಗಾಣದಲಿ ಹಿಂಡುತಲಿ....

**ಅಮರ:—** ಕನಸೊಂದ ನೆನೆಯುವೆಯ? ಸೊಯುವ ಮಿೂರಿದ ನುಡಿಯು!
ಇಂದ್ರ ಯಮರುಗಳೆಲ್ಲ ನಿಲುಕದರು ನನಗಂತು

**ಪೂಜಾರಿ:-** ಜಗದ ಎಟುಕಿಗು ದೂರ ಬಾಳಿ ಆಳುವ ಅವರು
ನನನಿನಗು ಎಂತು ನಿಲುಕುವರೈಯ್ಯ, ಮೂಢಾತ್ಮ....
ಮಿದು ಗೆಯ್ದು ಮನದ ಹದ, ಕಾಯುವನು ಬಾಗಿಸಲು,
ಕಂಡು ಒಲಿಯಲು ಬಹುದು, ಬಂದು ಹೆರಸಲು ಬಹುದು.
ನಿನ್ನ ಮರಣದ ಬಳಿಕ ಇಂದ್ರ ಕರೆಯಿಸಿಕೊಳುವ,
[illegible]

**ಅಬಲೆ:—** ಇಂದ್ರ ಹೆರಸದೆ ಇರಲು ಚಿಂತೆಯಿಲ್ಲ . . .

**ಪೂಜಾರಿ:-** ಏನೆಂದೆ? ಚಿಂತೆಯಿಲ್ಲ . . .

**ಅಬಲೆ:—** ಇಂದ್ರ ಹೆರಸದೆ ಇರಲು ಚಿಂತೆಯಿಲ್ಲವು ಎಂದೆ
ಯಮನ ಬಾಧೆಯ ಮಾತ್ರ ತಪ್ಪಿ ಬಾಳಲು ಬೇಕು

**ಪೂಜಾರಿ:-** ಪೂಜೆಯನು ಸಲಿಸಿದೊಡೆ, ಶಿರವಾಗಿ ನಮಿಸಿದೊಡೆ,
ಯಜ್ಞಯಾಗಗಳಿಂದ ಹವಿಸುಗಳ ಸಲಿಸಿದೊಡೆ

**ಅಮರ:—** ಏನೆಂಬೆಯೋ ನೀನು, ಅರಿಯೆನಯ್ಯ . . .

**ಪೂಜಾರಿ:--**ಅಜ್ಞಾನ ಕೂಪದಲಿ ಮುಳುಗೇಳುತಿಹೆ ನೀನು!
ಭೀತಿಯೇತಕೆ ನಿನಗೆ? ಬಲ್ಲಿದನು ನಾನಿರಲು.
ಇಂದ್ರಯಮರಿಗೆ ನಾನು ಶರಣು ಹೊಕ್ಕಂದದಲಿ
ನೀವೆನಗೆ ಶರಣಾಗಿ; ಸುಗಮವಪ್ಪುದು ಬಾಳ್ವೆ

**ಅಬಲೆ:—** ಶರಣು ಎನ್ನುವ ಕಜ್ಜ ಬಲು ಸುಲಭವಹ ಬಿಜ್ಜೆ

**ಅಮರ:—** ಶರಣೆನ್ನ ಬೇಕೆ ನಾವ್ ಏಕೆಂದು ತಿಳಿಯದೆಯೆ!

**ಅಬಲೆ:—** ಬಲ್ಲಿದರ ನೆಚ್ಚುತಲಿ ಶರಣೆನ್ನಲೇನು?

**ಪೂಜಾರಿ:--**ಶರಣೆಂಬುದೇ ಲೇಸು ಅರಿವಿಲ್ಲದರು ಎಲ್ಲ.
ಇಲ್ಲವಾದೊಡೆ ಯಮನು ನಾವಳಿದ ಮರುಕ್ಷಣಕೆ
ತನ್ನ ನರಕಕೆ ಸೆಳೆದು, ತುಳಿದು ಕಾಡಲು ಬಹುದು.
ಅಳಿವ ಮುನ್ನವೆ ಇಂದ್ರ, ಶಕ್ತಿಯುತ, ಗಜರಿಪನು.
ಬವಲು ಬೇಡುತಲಿರಲು, ಯಜ್ಞಯಾಗಗಳಿಂದ
ಉಪಚರಿಸಿ ನಮಿಸುತಿರೆ, ಇಹಪರದೆ ನೆಮ್ಮದಿಯು—

**ಅಬಲೆ:—** ಬಾ ಬಂಧು, ದೇವರಿಗೆ ಇವನ ಜತೆಯಲಿ ನಮಿಪ;

**ಅಮರ:—** ನಿನ್ನ ಮನಸಿನ ಒಲಕೆ ನಾ ಮಣಿಯಬೇಕಷ್ಟೆ.

[ಪೂಜಾರಿಯು ಮಣಿಯುವನು. ಅವನನ್ನನುಸರಿಸಿ ಅಬಲೆಯೂ ಅವಳನ್ನನುಸರಿಸಿ ಅಮರನೂ ಮಣಿಯುವರು. ಅವರೆದುರು ಇಂದ್ರ ಯಮರುಗಳ [illegible]ಗಳು ಕಾಣಿಸುವುವು]

## ಅಂಕ ೨.

[ಯಮನೂ ಇಂದ್ರನೂ ಜತೆಯಲ್ಲಿ ಬರುವರು]

**ಇಂದ್ರ:—** ದಕ್ಷಿಣದ ದಿಗ್ದೇವನೆನಿಸುತಿಹ ಯಮಧರ್ಮ,
ನಾಳಿನಾ ಮುಸುಕಾಚೆ ಏನು ಕಾದಿಹುದೆಮಗೆ!
ನಿನ್ನೆ ಬದುಕಿನ ಚಿತ್ರ ಭ್ರಮೆಯಂತೆ ಕಾಣುತಿದೆ
ಎಲ್ಲ ಮೂಲೆಗಳಲ್ಲಿ, ಸಂದು ಗೊಂದುಗಳಲ್ಲಿ
ಎಲ್ಲಿ ನೋಡಿದಡಲ್ಲಿ ನಾನೆ ನಾನೆಂದಾದೆ;
ನೆಲದಲ್ಲಿ, ಜಲದಲ್ಲಿ, ಬಯಲಲ್ಲಿ, ಬಾಳಲ್ಲಿ,
ಇಂದ್ರನೊಬ್ಬನ ಪೂಜೆ; ದಿಸೆಗಳಿಗೆ ನಾನೊಡೆಯ;
ನನ್ನ ನಾಯಕ ತನದಿ ನಿಮಗು ಸಂದಿತು ಹವಿಸು.
'ಇಂದ್ರಾಯ ಸ್ವಾಹಾಃ ಇಂದ್ರಾ ಇದನ್ನಮಮಃ'
ಎಂದು ಬ್ರಾಹ್ಮಣ ವೃಂದ ಯಾಗಗಳನೆಸಗಿಹುದು;
ಇಂದೇನು ಬರಿದಾಯ್ತು— ಭಕ್ತಿ ಎದೆ ಬರಡಾಯ್ತು!
ಇಂದಿಗೊಲ್ಲನೆ ಇಂದ್ರ? ಗುಡುಗು ಸಿಡಿಲಿಗೆ ಬೆದರಿ
ಬರಗಾಲಕತಿನೊಂದು 'ಮಳೆಯ ಕೊಡಿಸೋ' ಎಂದು
ನನ್ನ ನುತಿಸಿದ ಜನತೆ, ಏಕೆ ಕಣ್ಮರೆ ಇಂದು?

**ಯಮ:—** ಎಲೆ, ಇಂದ್ರ, ನೀನಾದೆ ಈ ಯುಗಕೆ ಬಲು ಸೌಮ್ಯ.
ಮೇಘನಾದನ ಗರ್ವ ಬರಿ ಮುಗಿಲ ಮಾಟವೆಂ
ಬರಿವು ಪಡೆದಿಹ ಜನತೆ, ಮರೆದಿಹುದು ಭಯಭೀತಿ;
ನೋಡೆನ್ನ ರೂಪವನೆ, ವಾಹನವ, ಪಾಶವನು—
ಎದೆ ನಡುಕದೊಳು ಜನಿಸಿ ದೇವತ್ವ ಪಡೆದಿಹೆನು;
ಜನರ ಪಾಪದ ಭೀತಿ ನನ್ನ ಚಿರಗೊಳಿಸಿಹುದು.
ಪಾಪವಿಲ್ಲದ ದಿನಕೆ ನಾನು, ನರಕಗಳಿಲ್ಲ.
ಎಲ್ಲಿಹುದು ಆ ಗಳಿಗೆ? ಬರಲುಂಟೆ ಆ ವೇಳೆ?
ನನ್ನ ನರಕದ ಭಯವು ಎಲ್ಲ ನರ ಕುರಿಗಿಹುದು;
ಸಾವೆಂದರಂಜುವರು—ಅಗ್ನಿ ಕುಂಡದ ಭೀತಿ,
ಕಾದ ಕಂಬದ ನೆನಹು, ಕುದಿವ ತೈಲದ ನಡುಕು.

ತಪ್ಪುಗಳು ಒಂದೊಂದು ಎಪ್ಪತ್ತು ಬಗೆಯಾಗಿ
ನೆನಪಿನಲಿ ಚಿಮ್ಮುತಿರೆ—ಯಮರಾಯಗಳಿವುಂಟೆ!
ಅಲಸಿಗಳ ರಾಜ್ಯದಲಿ ಪಾರಿತೋಷಕ ವ್ಯರ್ಥ.
ಬೆದರಿಕೆಗೆ ಬೆಲೆ ಅಧಿಕ, ಅದರಿಂದಲಿಹೆ ನಾನು

**ಇಂದ್ರ:—** ನನ್ನಾಳ್ವಿಕೆಗಿನ್ನು ಅಳಿಗಾಲ ಬಂತೇನು?
ನಿಮಗಿಹೆನು ನಾನೊಡೆಯ. ಎಲ್ಲರಧಿಪತಿ ನಾನು;
'ನಿನ್ನ ನರಕವ ಮುಚ್ಚು'—ಎಂಬ ಬಲುಹಿದೆ ಎನಗೆ;
ಸ್ವರ್ಗ ರಾಜ್ಯವೆ ನಿತ್ಯ ಎನ್ನ ಅಂಕೆಯೊಳಿರಲು
ಬಯಸರೇ ಈ ಜನರು ಅದರ ಸವಿಸೊಗಸುಗಳನೆಲ್ಲ?

**ಯಮ:—** 'ಸ್ವರ್ಗವನು ಬಯಸರೇ?' ಅನುದಿನವು ಕೋರುವರು.
ಅದನು ಬಯಸುವ ಮುನ್ನ— ಅದಕೊಡೆಯನೇ ಇಂದ್ರ
ಎಂಬ ಹೆದನವನೇಕೊ ಮರೆತಂತೆ ಕಾಣುವುದು.
ನನ್ನ ಹೆಸರಂತಲ್ಲ—'ಯಮ-ನರಕ'ಗಳು ಎರಡು
ಅವಳಿ ಮಕ್ಕಳ ತೆರದಿ ಬಿಡಿಸದೆಣೆಯಾಗಿಹವು

**ಇಂದ್ರ:—** ನಿನಗು ಬರಲಿದೆ ಕಾಲ; ನರಕವನು ನೆನೆವಾಗ
ಯಮನ ಮರೆಯುವ ಕಾಲ ಬಂದೆ ಬರಲಿದೆ ನೋಡು.

**ಯಮ:—** ಇಲ್ಲಿಲ್ಲ, ಎಂದಿಲ್ಲ; 'ಜನರ ಪಾಪದ ಭೀತಿ'!

**ಇಂದ್ರ:—** ಜನರ ಪುಣ್ಯದ ಬಯಕೆ ಇಂದ್ರನನು ಮರೆಸಿಲ್ಲ?

[ಯುಗ ಶಿಲ್ಪಿಯೊಬ್ಬನು ಮಣ್ಣನ್ನು ಹೊತ್ತು ತರುವನು]

**ಯಮ:—** ಅವನಾವನೋ ಮರುಳ; ಹೊರೆಯೇನನೋ ತಂದು
ಕುಳಿತಂತೆ ಕಾಣುವುದು—ಮಣ್ಣಿನಾಟವತೊಡಗಿ
ಏನೊ ರೂಪಿಸುತಿಹನು; ಎಷ್ಟವನ ಕೈಚಳಕ!

[ಶಿಲ್ಪಿಯು ಆ ಮರಳಿಂದ ಯಾವುದೋ ಒಂದು ಮೂರ್ತಿಯನ್ನು ನಿರ್ಮಿಸುತ್ತಿರಲು, ಯಮ ಇಂದ್ರರು ಮರೆಯಲ್ಲಿ ನಿಂತು ನೋಡುವರು]

**ಶಿಲ್ಪಿ:—** ಎಂದೆನ್ನ ದುಡಿತಕ್ಕೆ ಬರುವದೋ ಕೊನೆಗಾಲ?
ಯುಗಯುಗವು ದುಡಿಯುತ್ತ ಮೈಬೇನೆ ಬಂದಿಹುದು.
ಹೊ ಬೆರಳುಗಳು ಇಂದು ಬಲುವಾಗಿ ನೊಂದಿಹವು
ಮೃತ್ತಿಕೆಯ ರೂಪಿಸುತೆ ತಾವೆ ಮಣ್ಣಾಗಿಹವು.

ಮುಗಿಯದೆನ್ನಯ ಕಜ್ಜ—ಮುಗಿವುದೆಂದೋ ಏನೋ!
ಹೊತ್ತಿಗೊಪ್ಪುವ ತೆರದಿ ದೇವರನು ನಿರ್ಮಿಸುತೆ
ಜನಕೆ ಒಪ್ಪಿಸುತಿಹುದೆ ಉದ್ಯೋಗವಾಗಿಹುದು.
ಗೈದುವೇ ಈತನಕ ಸಂಖ್ಯೆಯೊಳಗಪರಿಮಿತ—
ಎಷ್ಟು ರೂಪಗಳವಕೆ! ಏನು ಹೆಸರಿನ ಮಾಯ!
ಐರಿಸೆನಿಬಿಸರೆಂಬ, ಇಂದ್ರ ಯಮರುಗಳೆಂಬ,
ಹಲವು ದೇವರ ರಚಿಸಿ ಉಡುಪು ತೊಡುಪುಗಳಿತ್ತು
ಆಯುಧವ, ವಾಹನವ, ಮಡದಿಯರ ಸಲಿಸುತಲಿ
ಪೂರ್ಣತೆಯು ದೊರೆವಂತೆ, ಭಕುತಜನ ತಣಿವಂತೆ,
ಕಾರ್ಯವೆಸಗಿದೆನಯ್ಯ; ಬಾಳಸಹಿಸಿದೆನಯ್ಯ,
ಇಂದ್ರಗಿತ್ತೆನು ವಜ್ರ, ಯಮನಿಗಿತ್ತೆನು ಪಾಶ . . .

**ಇಂದ್ರ:—** (ಅ) ಇಂದ್ರಗಿತ್ತೆನು ವಜ್ರ!

**ಯಮ:—** (ಅ) ಯಮನಿಗಿತ್ತೆನು ಪಾಶ!

**ಶಿಲ್ಪಿ:—** ಎಂಟು ದೇವರನೂಕಿ ಎಂಟು ನೂರರನಿತ್ತೆ
ವಿಷ್ಣು ಶಿವ ಬ್ರಹ್ಮರನು ನಿರ್ಮಿಸಿದೆ, ನಾ ನಿನ್ನೆ;
ವಿಷ್ಣುಗಿತ್ತೆನು ಸೋಗು—ಒಂದಲ್ಲ, ಹತ್ತುಗಳ!
ಶಿವನಿಗಾಯಿತು ತಿರುಗಿ ಹಲಕೆಲವು ಅವತಾರ.
ಒಬ್ಬನೇ ಬ್ರಹ್ಮನಿಗೆ ನಾಲ್ಮೊಸುಡು ಸಲಿಸಿದರು
ಜನರಮನಸಿನ ಕುಹಕ, ಅವರ ಆಸೆಯ ನಿಲುಕು,
ಪಡೆಯಲಿಲ್ಲವು ತೃಪ್ತಿ—'ದೊರೆಯದೆಂದರು ಮುಕ್ತಿ!'
ನೂರು ದೇವಿಯರನ್ನು ಸಾರಿ ರಚಿಸಿದೆ ನಾನು
ಉಮೆ, ಕಾಳಿ, ಚಂಡಿ, ಚಾಮುಂಡಿಯರ ಘೋರವನು,
ತೋಳುಗಳ ಮಾಲೆಯನು, ರುಂಡಗಳ ಪಂಕ್ತಿಯನು,
ರೌದ್ರ ಶಿಲ್ಪದ ಎಲ್ಲ ಬೀಭತ್ಸ ಬಗೆಗಳನು

**ಇಂದ್ರ:—** ಕಾಳಿ ಉಮೆಯರ ನಿಲಿಸಿ, ಇನ್ನಿಲ್ಲದರ ತರಿಸಿ,
ಇಳೆಯೊಳೆಮ್ಮಯ ನಿಲುವ ಕುಂದಿಸಿದನಿವನೇನು!

**ಯಮ:—** ಅವನೇನು ಗೈಯುವನು, ಅವನೇನು ನಿಲಿಸುವನು!
ಜನದ ಮನಸಿನ ಮಂಕು ಅವನ ಕರದಿಂ ಹೊಮ್ಮಿ

ಮಣ್ಣಿನಲಿ ಮೊಗವೊಡೆದು ಬಂದು ನಿಂತಿರ ಬೇಕು;
ಮಣ್ಣೆಷ್ಟು ನಿಜವಿಹುದೋ ಅಷ್ಟೆ ಸತ್ಯವು ಗೊಂಬೆ

**ಶಿಲ್ಪಿ:—** ಮೂರ್ತಿ ಕಟ್ಟುವ ಕುಶಲ ಮರವೆಯಾದಂತಿಹುದು.
ಕೊಟ್ಟ ಒಬ್ಬೊಬ್ಬನೊಳು ಜನಕೆ ಬಾರವೆ ತೃಪ್ತಿ?
ಎಲ್ಲ ದೇವರನೊಲಿಸೆ ಬಲುಸುಲಭದೊಳು ಹಾದಿ.
ವಿಷ್ಣುವನು ನಿರ್ಮಿಸಿದೆ—ಹಾಲುಪಾಯಸ ಸೇವೆ.
ಶಿವನ ತಂದಿರಿಸಿದೆನು—ಬಿಲ್ವಪತ್ರವೆ ಲಂಚ;
ವಿಘ್ನೇಶನನು ಕೊಡಿಸೆ ಉಂಡೆ ಚಕ್ಕುಲಿ ಊಟ!
ತಾಳ್ಮೆಗೆಟ್ಟೊಂದು ದಿನ ಕಾಳಿಕಾಂಬೆಯ ರಚಿಸಿ
ಕಣ್ಣು ಹೊರಳಿಸಿ ಇಟ್ಟೆ, ಕರಕೆ ಖಡ್ಗವನಿಟ್ಟೆ!
ಮುಡಿಯ ಕೆದರಿಸಿ ಬಿಟ್ಟೆ, ನಾಲಗೆಯ ನೀಡಿಸಿಟ್ಟೆ.
ರುಂಡ ಮಾಲೆಯ ತೊಡಿಸಿ, ತೋಳು ಪಂಕ್ತಿಯ ಬಿಗಿದೆ.
ಆಯ್ತೇನು? ಆಯ್ತೇನು? ಕಿಂಚಿತ್ತು ನಡುಕಿಲ್ಲ.
ಮುಂಚಿನಂತೆಯೆ ತಿರುಗಿ ಲಂಚದೊಳೆ ಸೇವೆಯ್ತು.
ಹಾಲುಪಾಯಸ ಬಿಟ್ಟು, ಬುರುಡೆ ಹೆಂಡವ ಪೂಜೆ;
ಹಣ್ಣು ಕಾಯಿಯ ಬದಲು, ಕುರಿ ಕೋಣಗಳ ಕಾಣ್ಕೆ!
ಬೇರೆಯೇ ನಿರ್ಮಿಸಲೆ? ಇನ್ನು ಮುಂದಿನ ಕೃತಿಯು
ಎಲ್ಲ ಭ್ರಮೆಗಳ ಕೆದರಿ ಪ್ರಳಯವನು ಕರೆವಂತೆ—
ಮಾನವರ ಕಲ್ಪನೆಯು ತಬ್ಬಿಬ್ಬುಗೊಳುವಂತೆ,
ನೂರು ಯಮರಂಜಿಸುವ ಭೀತಿಗಳು ಮೊಳೆವಂತೆ

**ಯಮ:—** ನೂರು ಯಮರಂಜಿಸುವ?

**ಶಿಲ್ಪಿ:—** ಎಂಥ ಪೂಜೆಗು ಅವನು ಒಲಿಯದಂತಿರ ಬೇಕು.
ಅವನ ಮುಂದಕೆ ನಿಲಲು ತುಟಿಗಳೆರಡೊಂದಾಗಿ,
ಕಣ್ಣುಗಳೆ ಕುರುಡಾಗಿ, ದಿಙ್ಮೂಢತೆಯ ಬಡಿದು
ಸುಳ್ಳು ಲಂಚದ ಪೂಜೆ ಹರಕೆಗಳ ಹೆಸರಡಗಿ . . .
ಯಾರೋ ಸನಿಯದೊಳಿಹರು; ಇಲ್ಲೆ ಮರೆಯಾಗುವೆನು

[ಅದೃಶ್ಯನಾಗಲು, ಇಂದ್ರ ಯಮರು ತಿರುಗಿ ಬಹಿರಂಗಕ್ಕೆ ಬರುವರು]

**ಇಂದ್ರ:—** ವಿಶ್ವಶಿಲ್ಪಿಯಲೀಲೆ ಮಾಯೆಗಳು ಹೆಚ್ಚಿನವು!
'ವಿಷ್ಣು ಶಿವರಿಗು ಇಂದು ಪೂಜೆ ನಿಂತಿತು' ಎಂದ!
ಇನ್ನಾರೋ ಬರುತಿಹರು! ಮರೆಯೊಳಿರುವುದೆ ಲೇಸು

[ಪೂಜಾರಿಯೂ ಅಬಲೆ ಅಮರರೂ ಬೇರೆ ಕೆಲವು ಶಿಷ್ಯರೂ ಬರುವರು ಅವರೆದುರಿನಲ್ಲಿ ಹಳೆಯ ದೇವತೆಗಳ ಪ್ರದರ್ಶನಾಲಯವೇ ಕಾಣಿಸುವುದು]

**ಪೂಜಾರಿ:—** ಲಾಲಿಪುದು ವಿನಯದೊಳೆ, ನೆರೆದ ಭಕುತಾವಳಿಯೆ,
ಈ ತಾವಿನೊಳು ನಿಮ್ಮ ಇಷ್ಟಾರ್ಥ ಸಿದ್ಧಿಪುದು.
ಮನದ ಬಯಕೆಗಳೆಲ್ಲ ಹೊಮ್ಮೊಡೆದು ಹೀಚಾಗಿ
ಫಲವ ತೊಡುವಂದದಲಿ, ಕಲೆತಿಹುದು ದೇವಗಣ.
ಮೂಲೆಮೂಲೆಯೊಳಿಲ್ಲಿ ನಿಂದಿಹುದು ದೇವಜನ.
ಹಿಂದಿನರು, ಇಂದಿನರು, ನಾಳಿನರು—ಬಯಸಿದರು.
ಆಚೆನಾ ದೂರದಲಿ ಸೂರ್ಯ, ಚಂದ್ರರು ಇಹರು;
ಮತ್ತವರ ಸನಿಯದಲೆ ಇಂದ್ರ ವಿಷ್ಣುಗಳಿಹರು
ಓ ಇಲ್ಲಿ ಸಾಲೊಳಗೆ ನಿಂದವರು—ಇಂದಿನರು.
ಅದಕು ಮುಂದೆಯೆ ಇಹರು—ನಾಳಿನಾ ದೇವಗಣ
ಕಾಣುವೊಡೆ ಕಣ್ಣಿರಲು—ಅವರನಾರಿಸಬಹುದು.
ಕಾಣಿಕೆಯ ನೀಡುತ್ತೆ, ಬಯಸುವುದ ಬೇಡುತ್ತೆ
ತೃಪ್ತಿ ತಣಿವುಗಳನ್ನು ತಂದು ಕೊಳಿರಿ—ಜನವೆ.
ಏನು ಬಯಕೆಯು ನಿಮಗೆ? ಯಾವ ದೇವರು ಒಪ್ಪು!

**ಅಮರ:—** ನನ್ನ ಬಯಕೆಯದೇನು! ಲೋಕ ಶುಭ ತಾನೊಂದೆ.

**ಪೂಜಾರಿ:--** ಶುಭಕೇನು ಕೊರತೆಯಿದೆ? ಅಲ್ಲಿ ಪೀಠದ ಮೇಲೆ
ನೀಳ ಸೊಂಡಿಲನಿಳಿಸಿ ಕುಳಿತ ಗಣಪತಿಯುಂಟು.
ವಿಘ್ನಗಳ ಹರಿಸುತಲಿ ಶುಭವ ನೀಡಲು ಆತ—
ಅವಗೆ ಸಲಿಸೆಲೊ ಪೂಜೆ . . .

ವಿಘ್ನೇಶ, ಪಾರ್ವತಿಯ ಮೈಕೊಳೆಯ ನಿಜರೂಪ.
ಒಡಕು ದಾಡೆಯ ಭೂಪ, ಬಿರಿದ ಉದರದ ತಾಪ-
ಹೀಗೆಂದು ಬಿರುದು ಸಾಸಿರ ಉಸುರಿ ಸಲಿಸುವುದು
ಎಳ್ಳು ಬೆಲ್ಲಗಳನ್ನು, ಉಂಡೆ ಚಕ್ಕುಲಿಯನ್ನು—

**ಅಸುರ:—** ಲೋಕ ಕಲ್ಯಾಣವದು ಚಕ್ಕುಲಿಯಿಂದೆಂತಕ್ಕು?
**ಪೂಜಾ:—** ಅಂಥ ನುಡಿ ಉಸಿರದಿರು. ಆ ಗಣಪ ತಾನೊಲಿಯೆ
ಚಕ್ಕುಲಿಯ ಮುಳ್ಳುಗಳು ಕರಗಿ ಬೆಣ್ಣೆಯು ಅಕ್ಕು.
**ಅಬಲೆ:—** ಪೂಜಾರ್ಯ, (ತುಸು ಸಂಕೋಚ ಪಡುತ್ತ)
ವಯಸು ಬಂದಿಹೆ ಎನಗೆ ಅನುರೂಪ ಪತಿ ಸಲಿಸು
**ಪೂಜಾ:—** ಅದಕೇನು—ನೋಡಿಲ್ಲಿ, ಕನ್ಯೆಯರ ಕಾಮಾಕ್ಷಿ—
ಭೋಗೂರು ಮಾದಪ್ಪ; ಕನ್ಯೆಯರಿಗಾಗಿಯೇ
ಜನುಮವೆತ್ತಿದಳಂತೆ—ಭಕುತಿಯಿಂ ಶರಣಾಗು;
ನಿನ್ನ ಕೊರಳೊಳಗೆಸೆವ ಕನಕ ಹಾರವನಿಲ್ಲಿ
ಆಕೆ ಪೀಠದ ಮುಂದೆ ಇರಿಸಿ ಬೇಡುತ ನಿಲ್ಲು.
ಹಿಂದೆ ಹಲವರು ಬಂದು ಮಾದಪ್ಪನನು ಬೇಡಿ
ತಂದೆ ತಾಯ್ತನ ಗಳಿಸಿ ಚಂದದೊಳು ಮೆರೆವರ್ಕೆ.
**೧ನೇ ಶಿಷ್ಯ:-** ನನ್ನ ಲಾಲಿಸೆಯೇನು ಕರುಣಾಳು ಗುರುವರನೆ,
ಯನ್ನ ತನುಮನವೆಲ್ಲ ಕುದಿದು ಬೇಗುದಿಗೊಂಡು
ಜೀವನವೆ ಬಾಳಲಾರದ ಭವಣೆಯಾಯ್ತು
**ಪೂಜಾ:—** ಏನಾಯ್ತು, ಏನಾಯ್ತು ನಿನಗಾದುದೇನು?
**೧ನೇ ಶಿಷ್ಯ:-** ನೆರೆಮನೆಯ ನೀಲಪ್ಪ ನನ್ನ ತೋಟಕೆ ಬಂದು
ಕದಿಯದಾ ದಿನವಿಲ್ಲ, ತೆಗೆಯದಾ ಬದುಕಿಲ್ಲ
**ಪೂಜಾರಿ:--** ಸರಿಯೇನು, ಇರಿಸಿಲ್ಲಿ ಚವಲವನು
ಆ ನಿಂತ ದೇವಂಗೆ ಶರಣುಶರಣೆನ್ನು
"ಓ ಕಲಗುಂಡ ದೇವಪ್ಪ—'ಕಳ್ಳ, ನೆರೆಮನೆ ನೀಲ
ನಿತ್ಯ ಬರುವನು ಕದಿಯೆ, ಕತ್ತರಿಸು ಅವನ ಕೈ"
ಎಂದು ಕರವನು ಬಿಗಿದು, ಬೇಡು ಭಯಭಕ್ತಿಯಿಂ
**೧ನೇ:—** ಸಾಕೇನು! ಈಗ ಬೇಡುವೆನದನು.

[ಎಂದು ಒಂದು ಚವಲಕಾಣಿಕೆಯನ್ನು ಪೂಜಾರ್ಯನಿಗಿತ್ತು]

"ಓ ಕಲಗುಂಡ ದೇವಪ್ಪ—ಆಲಿಸೆನ್ನಯ ಗೋಳು
ನೆರಮನೆಯ ನೀಲಪ್ಪ ಕಳ್ಳರೊಳು ಬಲು ಕಳ್ಳ

ಅವನ ದೆಸೆಯಿಂದೆನ್ನ ತೋಟ, ಮನೆಗಳು ಬರಿದು.
ಕಂಠಿಸರ, ಬದನೆಗಿಡ, ಚರಿಗೆ ಚಂಬುಗಳೆಲ್ಲ
ಮಾಯವಾದುವು ನಿಜದಿ, ಅವನ ಕೈಚಳಕದಿಂ!
ನಿತ್ಯ ಬಂದುಸುರುವೆನೆ—ನಿನ್ನ ಗುಡಿ ಬಲುದೂರ!
ಇಂದೇನು ಕದ್ದಿಹನೋ, ನಾಳೇನ ಕದಿಯುವನೋ
ಹಿಂದೇನು ಸರಿದಿಹವೊ—ಎಲ್ಲವನು ಕೊಡಿಸೈಯ್ಯ.
ಮುಂದೆ ಅವನೆಂದೆಂದು ಕೆಡುಕು ಗೈಯ್ಯದ ತೆರದಿ
ಕೈಗಳವನವು ಕೊಳೆತು, ಕಾಲುಗಳು ಮುರಿಯುತ್ತೆ,
ಮೂಲೆ ಸೇರುವ ರೀತಿ ಶಪಿಸೈಯ್ಯ—ಕರುಣಾಳು!

**೨ನೇ:—** ಪೂಜಾರ್ಯ, ಪೇಳೀಗ ಎನಗೆ ಸಲುವವರಾರು ಎಂದು?

**ಪೂಜಾರಿ:**--ಬಯಕೆಯೇನು!

**೨ನೇ:—** ನೋಡೆನ್ನ ಆಚಾರ್ಯ, "ಪರಿಚೆ" ಎಂಬುದೆ ಕಠಿಣ.
ಅದರೊಳಗು ಈ ವರುಷ, ಇರುಳು ದಿನವೆಂದಿಲ್ಲ,
'ಬುಕ್ಕಿ'ಗಂಟಿದೆನಯ್ಯ, ಲೆಕ್ಕಚರಿತೆಗಳೆಂದು.
ಆಗಲಿಲ್ಲವು ಪಾಸು—ಹಿಂದಾಯ್ತು ಅದುವೆ ಫಲ;
ಓದಲಿಕೆ ಬೇಸರವು; ಬದುಕಿನೊಳು ಅಪಮಾನ;
ಹಿರಿಯರಿಂ ನಿತ್ಯಪಳಿ; ದಾರಿಯೇನದು ಪೇಳು,

**ಪೂಜಾರ್ಯ:**-ನೋಡಿಲ್ಲಿ—ಹೊತ್ತಿಗೆಯ ಮೇಲೆಯೇ ನಿಂದವಳು,
ಅವಳೆ ನವಶಾರದೆಯು—ಪೊಸವಿದ್ಯೆಗಧಿದೇವಿ.

**೨ನೇ:—** ಏಕೋ ಮುನಿದಿಹಳವಳು—ನಂಬಿ ಫಲಕಾಣೆನಹೆ

**ಪೂಜಾರ್ಯ:**-ಇಲ್ಲಿಲ್ಲ—ಶರಣೆನ್ನು ಬಿಜ್ಜೆವಳರಿಗೆ ದೇವಿ
ಅವಳೊಬ್ಬಳಲ್ಲದಿನ್ನಾರು ನೆರೆಯಿಲ್ಲ

**೨ನೇ:—** ಶಾರದೆಯ ನಂಬಿಯೇ ಮೋಸವೋದೆನು ನಾನು!
ವಿಜಯ ದಶಮಿಯ ದಿನವೆ ಅಕ್ಕರವ ತೊಡಗಿದೆನು.
ಪುಸ್ತಕದ ಪೂಜೆಯನು ಪ್ರತಿ ವರ್ಷಗೈದಿಹೆನು
ಆದರೂ ಫಲಹೀನ! ಪರಿಚೆ, ವಿದ್ಯೆಗಳೆರಡು
ಬೇರೆ ಬೇರೆಯ ಕ್ಷೇತ್ರ—ಶಾರದೆಯಿಂದಪ್ಪುದೇಂ?.

**ಪೂಜಾರ್ಯ**:—ಅದಕೆಂದುದ್ವೈ ನಾನು—'ನವಶಾರದೆಗೆ' ಮಣಿಯೆ
ಈ ದೇವಿಯೇ ಬೇರೆ. ಹೊಸ ಬಿಜ್ಜೆಗಳ ಮಾತೆ
ಎಲ್ಲ ಹೊಸತೆರಗಳಿಗೆ.—

**೨ನೇ**:— ಜ್ಯಾಮಿತಿಗೆ, ಭೂಮಿತಿಗೆ—ಬಯ್ಯಾಲಜಿತ್ಯಾದಿ . . .

**ಪೂಜಾರ್ಯ**—ಎಲ್ಲ ಮಿತಿಗಳು ಸರಿಯೆ, ಎಲ್ಲ'ಲಜಿ', ಪರಿಚೆಗು—
ತೊರೆ ಚಿಂತೆ ಭೀತಿಗಳ, ಎರೆ ಧೋತ್ರ ದಾನವನು;
ಎನ್ನ ಹರಕೆಯ ಪಡೆದು ಅವಳ ಪೂಜಿಪೆಯಂತೆ

**೨ನೇ**:— ಉಸಿರು ಬಂದಿತು ಆರ್ಯ . . . . ,

**೩ನೇ**:— ನನಗೇನ ಉಸುರುವಿರಿ?

**ಪೂಜಾರ್ಯ**—ನಿನ್ನ ಮನವಿಯದೇನು? ಈ ಗುಡಿಗೆ ಹೊಸಬನಿಹೆ!
ಭಕ್ತಮಾಲಾಪದಕ, ಬಯಕೆಯೇಂ ಪೇಳು ಜವದಿ.

**೩ನೇ**:— ವಾಯು ನೌಕೆಯನೇರಿ ಶಾಂತಸಾಗರ ದಾಟಿ
ದೂರದಮರುಕ ನಾಡ ಚರಿಸಲಿಚ್ಛಿಪೆನಯ್ಯ;
ನಮ್ಮನೊಯ್ಯುವ ನಾವೆ ಅಂತರಿಕ್ಷದ ಯಾನ
ಎಡರಿಲ್ಲದೆಯೆಗೈವ ತೆರದಿ ಹರಸು . . .

**ಪೂಜಾರ್ಯ**:—(ಯೋಚಿಸಿ) ವಾಯು ನೌಕೆಯಯಾನ
ಎಡರಿಲ್ಲದೆಯೆ ನಡೆಯೆ
ವಾಯು ದೇವನ ಬೇಡು—ಎನ್ನಲೇ ಈತಂಗೆ!
ನಂಬಲಾರನು ಅವನು . . . ಇದಕಾರು ಹೊಸದೇವ?

[ಎನ್ನುತ್ತಿರುವಾಗಲೇ ಶಿಲ್ಪಿ ನಿರ್ಮಿಸಿದ ಉಗ್ರವಾದ ಹೊಸವಿಗ್ರಹ ವೊಂದನ್ನು ಕಂಡು]

ಅರರೆ—ಕಾಂಬುವುದೇನು! ಇದನೆ ತೋರುವೆನವಗೆ

**ಇಂದ್ರ**:— (ಆ ವಿಗ್ರಹವನ್ನು ತೋರಿಸಿ)
ನೋಡಲ್ಲಿ ಯಮಧರ್ಮ, ಆ ಶಿಲ್ಪಿ ಕೈವಾಡ!

**ಯಮ**:— ಅದ್ಭುತದಳೊಳದ್ಭುತವು.

**ಪೂಜಾರ್ಯ**:—(ಆ ಮೂರ್ತಿಯನ್ನು ಕಂಡು)
ಈ ಮೂರ್ತಿ ಘೋರತನ ಎನ್ನೆದೆಯನೇ ಬಿರಿದು
ಧೂಳಿ ಧೂಸರವಾಗಿ ಚೆಲ್ಲುತಿಹುದು

ಕಣ್ಣುಗಳು ಕಿಡಿಕಾರ್ವ ಅಗ್ನಿಪರ್ವತವಿಹುದು
ಬಾಯೆಂಬುದೇ ತೆರೆದ ಖಡ್ಗಶಾಲೆ!
ಈ ರೌದ್ರ ಮೂರ್ತಿಯಿರೆ ಎಲ್ಲ ದೇವರು ಸುಳ್ಳು
ಹಲ್ಲು, ಕಣ್ಗಳ ಮುಂದೆ ಆಯುಧಗಳೇ ಸುಳ್ಳು!
ಇದು ಕಾಲೇ! ಇದು ಕೈಯೆ! ಇದು ರೆಕ್ಕೆಯೆ, ಲೆಕ್ಕವೆಲ್ಲಿ?
ಎಂದಿಗೆಣೆಯಿಲ್ಲದಿಹ ಒಂದೆ ದೇವನು ಈತ . . . .

**ಶಿಷ್ಯರು:—** (ಬೆದರಿ) ಆಚಾರ್ಯ, ಆಚಾರ್ಯ, ಈ ದೇವನಾರು!
ಮೈಯೆಲ್ಲ ನಡುಗುವುದು. ಏಕೆ ಬೆದರಿಪೆ ದೇವ?
'ಅಖಿಲ ದೇವರ ತಿಂಬ ಪೊಸದೇವದೇವೇಶ.
ಯಾವ ಪೂಜೆಯು ಬೇಡ್ವೆ—ಅದ ನೀಡಿ ಮಣಿಯುವೆವು'
ಪೂಜಾರ್ಯ ನೀನುಸುರು; ಬೇಡಿ ತಣಿಸೈ ಅವನ,
ನಮ್ಮನಂಜಿಸಿ ಇಂತು ಪೀಡಿಸದಿರೆನ್ನು.

**೩ನೇ:—** ಗಾಳಿ ಬಿಟ್ಟಿಗೆ ಈತ ನಾಥನೇನು!
ಇರಬೇಕು, ಇರಬೇಕು—ಇನ್ನಾರು ಇಂತಿಲ್ಲ
'ಪ್ರೊಪೆಲರಿನ' ಗತಿಯಲ್ಲಿ ತಿರುಗುತಿದೆ ನಾಲಗೆಯು!
ಪೂಜಾರ್ಯ, ಹೇಗೆ ಸಲಿಸಲಿ ಇವಗೆ ಪೂಜೆಯನ್ನು?
ನೀನೆ ಸಲಿಸೆನ್ನ ಪರ, ಕಿರಿತನದಿಂದಂಜುವೆನು.
ಇಲ್ಲಿ ಇರಿಸುವೆ ನೂರುಹೊನ್ನುಗಳ ಕಾಣಿಕೆಯ;
ನಾವೆ ಹೊರಡುವ ವೇಳೆ ಒದಗಿ ಬಂದಿದೆ ತೀವ್ರ—
ಪೊರಮಡಲೆ! ಶುಭವ ಕರುಣಿಸುವಂತೆ ಕೋರುವೆಯ?

(ತೆರಳುವನು)

**೧ನೇ:—** ನೀಲಪ್ಪನನು ಕೊಲಲು ಈ ದೇವನೇ ಸಮನು!
ಮುಖವ ದಿಟ್ಟಿಸಲಾರೆ, ಬಳಿಯೊಳಿರುವಂತಿಲ್ಲ;
ಈ ಉಗ್ರತನಕೆನ್ನ ರಕುತವಪ್ಪುದು ಆವಿ.
ದೂರದಲಿ ಇರಿಸಿಹೆನು ನೂರು ತಾಮ್ರದ ಕಾಸು
ಒಲಿಸವನ—ಕಳ್ಳನೀಲನು ತೀವ್ರ ಮಣ್ಮುಕ್ಕಲಿ.

(ತೆರಳುವನು)

**೨ನೇ:—** ನಿಲ್ಲಲಾರೆನು ನಾನು—ಆತುರವು ನನಗು ಇದೆ;
ನೂರು ರಜತದ ತುಣಕು ಇರಿಸಿ ಪೋಗುವೆನಾರ್ಯ

(ತೆರಳುವನು)

**ಅಬಲೆ:—** ಈತನಾ ತಾಪಕ್ಕೆ ಧೂಪವಾದಪೆ ನಾನು
ನಿಲ್ಲುವುದು ಮರುಳುತನ; ನೂರು ನಿಕೆಲನು ಸಲಿಸಿ
ದೂರ ಸರಿಯುವೆನಮಮ! ಆರ್ಯ ಕೇಳಿದೆಯಲ್ಲ—
ಪತಿರಾಯನನು ಸಲಿಸಿ ಬಾಳ ಬೆಳಗೈ ತಂದೆ,

(ತೆರಳುವಳು)

**ಅಮರ:—** ಧಾವಿಪೆಯ! ಸೋದರಿಯೆ,
ಬಂದುದಕೆ, ನಿಂದುದಕೆ—ಈ ದೇವನಾರೆಂದು
ಕೇಳಿ ತಿಳಿಯುತೆ ಸರಿವ; ಪೂಜಾರ್ಯ ಅರುಹೈಯ್ಯ

**ಪೂಜಾರಿ:—**

[ಮೌನ. ಅವನ ದೃಷ್ಟಿಯೆಲ್ಲ ಹಣದ ಕಡೆಗೆ. ಅದನ್ನು ಕಂಡು ಅಮರನೂ ನಿರಾಶನಾಗಿ ಸರಿಯುವನು.]

ನೂರು ಹೊನ್ನಿನ ತುಂಡು
ನೂರು ಬೆಳ್ಳಿಯ ತುಣುಕು
ನೂರು ತಾಮ್ರದ ಕಾಸು
ನೂರು ನಿಕೆಲಿನ ನಾಣ್ಯ
ಎಲ್ಲ ಕುಣಿಯುತಲಿಹವು
ಕನಸಿಗೂ ಸೋಜಿಗವು!
ಧನಮಾತ್ರ ಉಳಿದಿಹುದು, ನೆರೆದ ಜನರಾರಿಲ್ಲ;
ಅಂಜಿ ಸರಿದಿರಬೇಕು, ದೂರ ಸಾರಿರಬೇಕು.
ದೇವ ಉಗ್ರವದಾಗೆ ವರಮಾನವತ್ಯಧಿಕ.
ಇಷ್ಟುಹೊನ್ನಿನ ಹರಕೆ ಎಂದು ಬಂದುದು ಇಲ್ಲ.

[ಹಣವನ್ನು ಎಣಿಸಿ]

ಯಾವ ಹೆಸರಿನ ಬಿರುದ ಸಲಿಸಿ ಅರ್ಚಿಸಲಿವನ!
ಹೊನ್ನಮಳೆ ಸುರಿಸಿದನು; ಅದುವೆ ನಾಮಾಂತರವು.
'ಕನಕವರ್ಷಣ ಕೇತು'—ಎಂಬುದೇ ಸಮದ ಹೆಸರು!

[ದೇವನ ಮೋರೆಯನ್ನು ಕಾಣುತ್ತಲೇ ತಾನೂ ಬೆದರಿ]
ದೈವ ವಿಗ್ರಹೆ ಕಾಣೆ ನಿಲುವೆಲ್ಲ ಕುಸಿಯುವುದು,
ರಕುತವೆಂಬುದು ಕುದಿದು ಹೊಗೆಯಾಗಿ ಹಾರುವುದು;
ಅವನ ಪೂಜಿಪುದೆಂತು, ಮೊರೆದು ಬೇಡುವುದೆಂತು!

[ಯೋಚಿಸಿ ಯೋಚಿಸಿ]

ಇದುವೆ ಸಮ! ಇದುವೆ ಸಮ—"ಓ ಭಕುತ ವೃಂದ
ಬಂದಿಹುದು ಹೊಸಯುಗವು—ಸಂದಯುಗದಂತಲ್ಲ.
ಜಗದ ನಾಯಕನವನು ಇಲ್ಲಿ ಮೈದೋರಿಹನು—
'ಕನಕ ವರ್ಷಣ ಕೇತು' ಎಂಬ ಅಭಿದಾನದಲಿ.
ಹಿಂದಿನಾ ದೇವರುಗಳಾಳ್ಕೆಗಾಯಿತು ಕೊನೆಯು;
ಇಂದ್ರ, ಯಮ, ಟ್ರೈಫೂನು—ಎಲ್ಲರಾದರು ಇಂದು
ಈ ದೇವಮಂದಿರದ ಸೋಪಾನ ರಾಜಿಗಳು!
ಬನ್ನಿ, ಪೂಜೆಯ ಸಲಿಸಿ, ಬನ್ನಿ ಭಕುತಿಯ ಸುರಿಸಿ,
ಪೊಸದೇವನಾಗಿರಲು, ಪೊಸಬಗೆಯದೇ ಪೂಜೆ!
ಎಲ್ಲ ನೂರರ ಎಣಿಕೆ—ನೂರು ಹೊನ್ನಿನ ತುಣಕು
ನೂರು ರಜತದ ಚೂರು
ನೂರು ತಾಮ್ರದ ಬಟ್ಟು
ನೂರು ನಿಕೆಲಿನ ಕಾಸು!
ಎವೆ ಮುಚ್ಚಿ ಕಾದಿಹನು—ಪೂಜಾರ್ಯ ನಿಮಗಾಗಿ"

[ಎಂದು ತಾನು ಧ್ಯಾನಮಗ್ನನಂತೆ ಕುಳಿತಿರುವನು]

ಈ ದೇವಗಿಹೆ ಜ್ಯೋತಿ ಕಣ್ಣು ಕುಕ್ಕುವುದದಕೆ
ಕಣ್ಣು ಕಟ್ಟುತೆ ಬನ್ನಿ—ಉಸಿರ ಸುರಿಸದೆ ಬನ್ನಿ
ನೂರರಾ ಎಣಿಕೆಯಲಿ ಧನಕನಕವನು ತನ್ನಿ.
ಕನಕ ವರ್ಷಣದೇವ ವಿಗ್ರಹಕೆ ತಲೆವಾಗಿ
ಬೇಡಿರಿಷ್ಟಾರ್ಥವನು! ಸಾಧಿಪವು ಸಕಲ ಶುಭ.

[ಜನಗಳು ಹಿಂಡು ಹಿಂಡಾಗಿ ಬಂದು ವಿಗ್ರಹದ ಮುಂದೆ ಮಣಿಯುವರು]

**ಪೂಜಾರಿ:**--ನೂರು ಹೊನ್ನಿನ ತುಣುಕು!
ನೂರು ರಜತದ ಚೂರು!

ನೂರು ತಾಮ್ರದ ಬಟ್ಟು
ನೂರು ನಿಕೆಲಿನ ಕಾಸು

[ಶಿಲ್ಪಿಯು ಆಗಮನವಾಗುವುದು. ಅವನು ಈ ನೋಟವನ್ನು ಕಂಡು]

**ಶಿಲ್ಪಿ**:— ಈ ಶಿಲ್ಪವೂ ವ್ಯರ್ಥ! ಈ ಯತ್ನವೂ ಬರಿದು!
ಘೋರಮೂರ್ತಿಯು ಕಂಡು ಬೆದರಿ ವರ್ತಿಸಲೆಂದೆ,
ಎದೆಯು ಬಿರಿಯುವ ತೆರನ ರೂಪವನು ಅದಕಿತ್ತೆ.
ಪೂಜಾರಿ ಬಲು ಚತುರ, ಚತುರೋಕ್ತಿಯೊಳು ಚತುರ.
ರೂಪವನೆ ಕಾಣದಿಹ ಭಕುತಿಮಾರ್ಗವ ತೋರಿ
ನನಗು ಮಂಕನು ಬಳೆದು ತಾನೆ ಗೆದ್ದಿಹನಿಂದು.
ಭಕ್ತಕೋಟಿಯು ಕರೆವ, ಕಣ್ಣುಕಟ್ಟಿರಿ ಎಂಬ.
ಭಕ್ತಿಯೋ, ಕುರುಡಂತೆ! ಪೂಜೆಗೂ ಆ ಗತಿಯೆ!
ಇಂತಿರಲು ನನ್ನ ದೇವನ ರೂಪ ಕಾಂಬರಾರು?

**ಪೂಜಾರಿ**:-- ನೂರು ಹೊನ್ನಿನ ತುಣುಕು
ನೂರು ರಜತದ ಚೂರು
ನೂರು ತಾಮ್ರದ ಬಟ್ಟು
ನೂರು ನಿಕೆಲಿನ ಕಾಸು

[ಇಂದ್ರ ಯಮರು ಮುಂದೆ ಬರುವರು]

**ಯಮ**:— ನನಗಾದರೂ ಮಾನ ಉಳಿವುದೆಂದೇ ತಿಳಿದೆ!
ನನ್ನ ನರಕದ ಭೀತಿ ಜನವ ನಡೆಸುವುದೆಂದೆ—
ತಮಗೊಲಿಮುದನು ಕಂಡು, ಉಳಿನುದಕೆ ಕುರುಡಾಪ
ಈ ಜನದ ಜಂಗುಳಿಗೆ ರೌರವವು ಕನಸೆ ಸರಿ!



## ಅಂಕ ೩

[ಶಿಲ್ಪಿಯೊಬ್ಬನೇ ಯೋಚನಾಪರನಾಗಿ ಕುಳಿತಿರುವನು]

**ಶಿಲ್ಪಿ**— ನರನ ಒಡಲಿನ ಭೀತಿ ನನ್ನ ಪ್ರತಿಭೆಯು ಸ್ಫುರಿಸಿ
ದೇವಾಧಿದೇವರನು ನಿರ್ಮಿಸಲು ಅನುವಾಯ್ತು;
ಅವರ ಹೃದಯದ ಪ್ರೇಮ ಲವಲೇಶ ನೆರವಾಗಿ
ಚೆಲುವು ಚೆನ್ನಿಗರನ್ನು ಕೆತ್ತಲನುವಾಯ್ತು.
ಆದರೇನ್? ಆದರೇನ್? ವಿಕಸಿಸುವ ಜಗವಿದುವು,
ದಿನದಿನದ ಪರಿ ಬೇರೆ; ದಿನದಿನದ ಮತಿ ಬೇರೆ;
ಅದರ ಬಯಕೆಯ ತಣಿಸೆ ಬೇಕೇನು ರೂಪಗಳೋ!
ತನ್ನ ಅಂಜಿಕೆ ತಣಿಸೆ ಮಾನವಗೆ ದೇವನೇ?
ಅವನ ಆಸೆಯ ಫಲಿಸೆ ದೇವ ವ್ಯೈದೋರಲೇ?
ಮನದ ಸೊಗ ಸಂತಸಕೆ ಇರಬೇಕೆ ಆ ದೇವ—
ಇವುಗಳಿಲ್ಲವ ಮರೆತು ಪೂಜಾರಿ ಲಾಭಕ್ಕೆ
ಆ ದೇವ ಹೆಗಲಿರುಳು ದುಡಿಯಬೇಕೆ?
ಜಗದ ಬಯಕೆಯ ತಣಿಪ ದೇವರನು ಇತ್ತೆನಗೆ
ಆತನಿರಬೇಕೇಕೆ ಎಂದರಿಯದಾಯ್ತೆ?
ಜಗವು ಹಿಗ್ಗುತ್ತಿಹುದು
ಆಸೆ ಬಿತ್ತರಿಸುತ್ತಿದೆ
ಕರ್ಮ ದುಡುಕುತ್ತಿಹುದು
ಪಾಪ ಪುಣ್ಯಗಳಿಲ್ಲ—ರೂಪಬದಲಿಪವು;
ಇದಕಾಗಿ ಬೇಕೆಂಥ ದೇವ, ದೆವ್ವಗಳೋ.

[ಅಬಲೆಯು ಆ ಹಾದಿಯಾಗಿ ಬರುವಳು]

**ಅಬಲೆ**:— ಆವನಿವ, ಎಲ್ಲೇನೊ ಕಂಡಂತೆ ಅನಿಸುವುದು!
ಕನಕ ವರ್ಷಣಕೇತುವಿನ ಭಾರಿ ಮೂರ್ತಿಯನೆ
ಕಂಡು ಅಳುಕಿದ ದಿನವೆ ಅಲ್ಲೆಲ್ಲೊ ಕಂಡಿಹೆನು.
ಓ ದೇವ ನೀನಾರು?

**ಶಿಲ್ಪಿ**:— ಸೋದರಿಯೆ, ನಾ ಶಿಲ್ಪಿ.

**ಅಬಲೆ:—** ನೀ ಶಿಲ್ಪಿ! ಶಿಲ್ಪಿಗೇತರ ಕೆಲಸ?

**ಶಿಲ್ಪಿ:—** ಶಿಲ್ಪಿಗೇತರ ಕೆಲಸ! ಜನರ ಮನವನು ಇಳಿದು,
ಅವರಾಸೆ ಬಯಕೆಗಳ ಅಳೆದು, ಕಲ್ಪನೆ ಕೆಣಕಿ,
ಅವಕೊಪ್ಪುವಾ ಬಗೆಯು ದೇವ ಮೂರುತಿ ರಚಿಸೆ
ದುಡಿಯುವುದಕಿಹೆ ನಾನು—ಇನ್ನೇನು ಕೆಲಸ!
'ವೀನಸ'ನು 'ಎನಿಬಿಸ'ನು 'ಇಂದ್ರ' 'ಟ್ರೈಫೂನ'ರನು
ರಚಿಸಿದಾತನು ನಾನು—ಮರವೆಯಾಗಿರಬಹುದು;
ಇಂದಿನದ ಪೇಳುವೆನು—ಮಾದವ್ವ, ಕಲಗುಂಡ, . . .
ಅಷ್ಟಲ್ಲ . . ನಿನ್ನೆದಿನ ಪೂಜಾರಿಯೆದೆ ಬಿರಿದ
ಕನಕವರ್ಷಣನುಗ್ರ ಮೂರ್ತಿಯೆನ್ನಯ ಮಾಟ.

**ಅಬಲೆ:—** 'ಕನಕವರ್ಷಣಕೇತು'—ಎಂಥ ಕರ್ಕಶ ಹೆಸರು!
ಶಿಲ್ಪಿ, ನೀ ಎದೆಗಾರ. ಅವನನೀ ರಚಿಸಲ್ಕೆ;
ನಾ ಕಂಡವಳೆ 'ಇನ್ನು ಕಾಣಲಾರೆನು' ಎಂದೆ,
ಅವನ ಒಲಿಸಲಿಕೆಂದು ನೂರು ನಿಕೆಲನು ಎಸೆದೆ
ಕಣ್ಮುಚ್ಚಿ . . . .

**ಶಿಲ್ಪಿ:—** (ನಗುವನು)

**ಅಬಲೆ:—** ನಗುವೆಯೇತಕೆ ಶಿಲ್ಪಿ?

**ಶಿಲ್ಪಿ:—** "ನನ್ನದೇವರನೊಲಿಸೆ, ಕನಕವರ್ಷಣನೊಲಿಸೆ,
ನೂರು ನಿಕೆಲಿನ ನಾಣ್ಯ!"

**ಅಬಲೆ:—** ಪತಿಯನೀಯಲು ಇತ್ತ ಹರಕೆ ಅದುವೆ.

**ಶಿಲ್ಪಿ:—** ಪತಿಯ ಸಲಿಸೆಂದವನ ಬೇಡಿದೆಯ ನೀನು!

**ಅಬಲೆ:—** ಯಾರ ಬೇಡಲಿ ಅದಕೆ?

**ಶಿಲ್ಪಿ:—** ಇರಲಿರಲಿ—ನೀಡಿದನೆ ಆ ದೇವ, ಪತಿದೇವನ?

**ಅಬಲೆ:—** ಅದಕಾಗಿ ಕಾಣಿಕೆಯ ಸಲಿಸಿಹೆನು; ಅಷ್ಟು ನಿಜ

**ಶಿಲ್ಪಿ:—** ಯಾರಿಗೈ

**ಅಬಲೆ:—** ಕನಕವರ್ಷಣನವಗೆ

**ಶಿಲ್ಪಿ:—** ನಿಮ್ಮಿಬ್ಬರಿಗು ನಡುವೆ ನಿಂದಾತ, ಅರ್ಚಕಗೆ.

**ಅಬಲೆ:—** ಅಹುದಹುದು; ಆತನೇ ಸಲಿಸಿದನು ದೇವನಿಗೆ

**ಶಿಲ್ಪಿ**:— ದೇವ ದೀನರ ನಡುವೆ ಅವನೇಕೆ ನಿಂದಿಹನು?
**ಅಬಲೆ**:— ನಮಗಾಗಿ ದೇವನನು ಒಲಿಸಿಕೊಡೆ; ವರ ಸಲಿಸೆ;
**ಶಿಲ್ಪಿ**: — ನೀನೆ ಕೇಳಲಿಕೇನು?
**ಅಬಲೆ**:— ದೇವನೊಲಿಯದೆ ಇರಲು?
**ಶಿಲ್ಪಿ**:— ನಿನಗು ದೇವಗು ನಡುವೆ ಪೂಜಾರಿ ತಾನಿದ್ದು
ಇರುವ ದೂರವ ಮಿಗಿಸಿ ನಿಂದಿಹನು, ತೊಡೆಯುವನ
**ಅಬಲೆ**:— ನಾನೆ ದೇವರ ಬಳಿಗೆ ಹೋಗಲಾಪುದೆ ಶಿಲ್ಪಿ?
ಅವನುಗ್ರತಮ ಕಾಯ, ಆ ಕ್ರೂರ ನಯನಗಳು!
**ಶಿಲ್ಪಿ**:— ಅಂದು ಸಿಡಿಲಿಗೆ ಬೆದರಿ, ಇಂದ್ರನೆಂದೊರಲಿದಳು
ಇಂದು ಕನಕನ ಸನಿಯ ಬರಲೆಂತು ಬಯಸುವಳು!
**ಅಬಲೆ**:— ಅಂದಿನಾ ದಿನದಾಟ ನಿನ್ನರಿವಿನೊಳಗೆಂತು?
**ಶಿಲ್ಪಿ**:— ಶಿಲ್ಪಿಯೆಂಬುವನವನು ಯುಗಮಾನವರಿತವನು
**ಅಬಲೆ**:— ಅಂತಿರಲು, ಇಂದಿನಕೆ ಕನಕವರ್ಷಣಗಿಂತ
ಸೌಮ್ಯ ದೇವನ ಕೊಡಿಸಿ, ಬದುಕ ಕಾಯುವೆಯಾ?
**ಶಿಲ್ಪಿ**:— ನಿನ್ನ ಭೀತಿಯು ಅಡಗೆ ದೇವನಾಗುವ ಸೌಮ್ಯ;
ನಿನ್ನ ಪ್ರೇಮವು ಮಿಗಿಲು ದೇವಗಕ್ಕರೆ ಬಹುದು.

[ಎಂದು ತೆರಳಲನುವಾಗುವನು]

**ಅಬಲೆ**:— ಪೋಗದಿರು ಏ ಶಿಲ್ಪಿ, ನಿನ್ನ ದನಿ ಕೋರುವೆನು;
ನಿನ್ನ ವಾಣಿಯೊಳೇನೊ ಅಮೃತದ ಉಣಿಸಿಹುದು
**ಶಿಲ್ಪಿ**:— ನಾನಿಲ್ಲಿ ಸಲ್ಲದಿಹೆ, ಪೂಜಾರಿ ಬರುತಿಹನು;
ಜಗದ ಮಂಕನು ಮಿಗಿಸಿ ಇಳೆಯ ಸಾಗಿಪ ಯೋಗಿ!

[ಆತನು ತೆರಳುವನು]

**ಪೂಜಾರಿ**:—ಆವನೊಡನದು ನೀನು ಸರಸವಾಡುತಲಿದ್ದೆ.
ಪರ ಪುರುಷನಿರಬೇಕು; ನಿನಗಿನ್ನು ಕೌಮಾರ್ಯ
**ಅಬಲೆ**:— ಕನಕವರ್ಷಣಗಿತ್ತೆ ನೂರು ನಿಕೆಲಿನ ತುಣುಕ
ಆತ ಕರುಣಿಸಲಿಲ್ಲ ಪತಿದೇವನನು ಇನ್ನು
**ಪೂಜಾರಿ**:—ನಿನ್ನಿನಾ ಕಥೆಯದುವೆ; ಅದನು ಮರೆವುದು ತೀವ್ರ

ಇಂದೆ ಕಂಡಿಹೆ ನಾನು ಹೆಚ್ಚು ಹೊಸ ದೇವನನು.
ಈ ದೇವನೇ ಬೇರೆ, ಅವಗೆ ಪೂಜೆಯು ಬೇರೆ
ಬೇರೆ ಧ್ಯಾನದ ರೀತಿ; ಬೇರೆ ಯೋಗದ ಬಗೆಯು

**ಅಬಲೆ:**— ನಿಜಕು ಹೊಸ ದೇವನೇನು?

**ಪೂಜಾರಿ:**—ಈ ದೇವ ಮುಂದೆ ಬರೆ, ಉಳಿದವರು ಕಾಣಿಸರು

**ಅಬಲೆ:**— ರೂಪವನು ಬಣ್ಣಿಪೆಯು; ಚೆಲುವನೇ ತೋರಿಕೆಗೆ!

**ಪೂಜಾರಿ:**—ಬಣ್ಣಿಪುದು ಅಸದಳವು; ಕನಕವರ್ಷಣಗಿಂತ
ನೂರ್ಮಡಿಯ ಘೋರತನ, ಕಣ್ಣ ಮುಚ್ಚುತೆ ಧ್ಯಾನ.

**ಅಬಲೆ:**— ಕೇಳುವನೆ ಆ ದೇವ?

**ಪೂಜಾರಿ:**—ಕಿವಿಗಳನು ನಾವ್ತೆರೆಯೆ, ನಾದಸಾಗರ ಮೊರೆದು
ದಿಗ್ಭ್ರಮೆಯು ಪ್ರಾಪ್ತಿಪುದು
ಅವನ ವೈರಂಧ್ರದಿಂ ಹೊರಕೆ ಸೂಸುವ ಗಾಳಿ
ಮೂಗು ಮುರಿವಂತಿಹುದು
ಅಂತಿರುವನಾದರೂ ಪೊಸಬಗೆಯ ಯೋಗವನು
ಸಾಧಿಸಲು ಒಲಿಯುವನು.
ಪೂಜಾರ್ಯ ಇಹೆನದಕೆ—ಅದಕೆ ಮಾರ್ಗವ ತೋರೆ;
ಅವನೆ ಒಲುಮೆಗೆ ಪಥವು.
"ಎಲ್ಲ ನನ್ನಡಿ ಇರಿಸಿ, ಎಲ್ಲ ಇಂದ್ರಿಯ ಬಿಗಿದು
ನಾನು ತೋರಿಪ ಪಥದಿ, ಇಳಿದು ಸಾಗುತ ಬರಲು
ಹಿರಿಯ ಸತ್ಯದ ಬಗೆಯು ಅರಿವಿನೊಳು ನಿಲುಕುವುದು!
ಗುರು ತೋರಿದಲ್ಲಿಹೆನು—ದೇವ ದೇವರದೇವ,"

**ಅಬಲೆ:**— ಇಂದ್ರಿಯವ ಮೀರುವೊಡೆ ನಮಗೆಲ್ಲಿನಾ ಅರಿವು?

**ಪೂಜಾರಿ:**— ಇಂದ್ರಿಯಗಳಿರುವನಕ ಗಮ್ಯನಲ್ಲವು ಅವನು.
ಸಾಧನೆಯ ಮಾರ್ಗವದು ವಾದ ಬಾಹಿರ, ತಂಗಿ
ಸಾಧಕಗೆ ವೇದವದು—ಗುರುವು, ಗುರುವಚನಗಳು,
ಪತಿಭಿಕ್ಷೆಯೊಳು ನೀನು ನಿಶ್ಚಿತಳು ಇಪ್ಪಲ್ಲಿ
ಎಲ್ಲ ಎನಗೊಪ್ಪಿಸುತೆ, ಯೋಗಮಾರ್ಗವ ಕೊಳ್ಳು.
ತ್ವರೆಗೊಳ್ಳು, ತ್ವರೆಗೊಳ್ಳು—ಅಲ್ಲಾರೋ ಬರುತಿಹರು.

**ಅಬಲೆ:—** ನಮ್ಮಂತೆ ನರರಿಹರು

(ಅವರನ್ನು ಕಂಡು)

**ಪೂಜಾರಿ:—** ನಮಗು ದೇವಗು ನಡುವೆ ಇತರ ಜಗವಿರ ಕೂಡ

(ತೆರಳುವರು; ಅಸುರನು ಬರುವನು)

**ಅಸುರ:—** ಪೂಜಾರ್ಯ ಸಾರುತಿಹ ದೇವನವ ಬೇರೆಯೇ
ಅವನ ಕಾಣಲು ತಪದಿ ಮುಣುಗಿ ನಿಲ್ಲುವುದಂತೆ!
ತಪದ ಸಾಧನಕಂತೆ ಜಗವೊಂದು ಸಲದಂತೆ!
ಇಂದ್ರಿಯಗಳೆಮಗು ದೇವಗು ನಡುವೆ ತಡೆಗಳಂತೆ!
ಅಂಥ ದೇವನೆ ಏಕೋ, ಅಂಥ ಪೂಜೆಯೆ ಏಕೊ!
ಹಿಂದಿನದ ಪೂಜೆಗಳ ಕಂಡು ಅಚ್ಚರಿಗೊಂಡೆ.
ಆ ದೇವರೆಂಥವರು! ಆ ಪೂಜೆಯೆಂಥಹದು!
'ಅದನೀಡು' ಎಂದಿಹರು, 'ಇದನೀಡು' ಎಂದಿಹರು!
ದೇವನೆಂಬವನನ್ನು ಬಣಜಿಗನ ಗೈದಿಹರು.
ಇವರ ಪೂಜೆಯ ಕೊಂಡು, ಇವರ ಲಂಚವ ತಿಂದು
ಸ್ವರ್ಗವನೊ ಸೌಖ್ಯವನೊ ಇನ್ನಾವುದನೊ ಈವ!
ಕೋಮಟಿಯ ಗೈದಿಹರು ಆ ದೇವನನ್ನು!
ಇಳೆಯ ಹುಟ್ಟಿಸಿದಾತ, ಅದುವೆ ತಪ್ಪೆಂದೊಪ್ಪಿ
ಹುಟ್ಟನಡಗಿಸೆ ನಿಂತ ಪಶ್ಚಾತ್ತಾಪಿಯೇ?
ತನ್ನ ಸೃಷ್ಟಿಗು ತನಗು ಮಾಯೆಯನು ನಡುವಿರಿಸಿ
ತನ್ನವರ ವಂಚಿಸಲು ಹೊರಟನೇನು?
ಜಗವೆ ಮಿಥ್ಯವು ಅಂತೆ, ಆವಾದಿ ಸತ್ಯವೆನೆ,
ಆವಾದ ಸತ್ಯವೆನೆ—ಏತರದು ಆಸ್ಪದವು?
ದೇವನೊಲಿಸುವ ಬಗೆಗೆ ಇಂದ್ರಿಯವು ಬೇಡದಿರೆ
ಇಂದ್ರಿಯಗಳಿತ್ತವನ ಹೇತುವೇನರಿಯೆ!
ಜಗದಿಂದ ಭಕುತನನು ಸೆಳೆದು ಹೀರುವ ದೇವ,
ಜಗದಿಂದ ದೇವನನು ಕಿತ್ತು ಕಾಣುವ ಭಕುತ,
ಇಬ್ಬರೂ ಹಿರಿಯ ಹಿತ ಸಾಧಿಸುವ ಸ್ವಾರ್ಥಿಗಳು.

[ಶಿಲ್ಪಿಯು ಆಗಮನವಾಗುವುದು]

**ಶಿಲ್ಪಿ:—** ಅದೇನನೆಂದೆ—ಆವ ನವಿನುಡಿಯದುವು!

**ಅಮರ:—** ಜಗದಿಂದ ಭಕುತನನು ಸೆಳೆದು ಹೀರುವ ದೇವ,
ಜಗದಿಂದ ದೇವನನು ಕಿತ್ತು ಸೆಳೆಯುವ ಭಕುತ
ಇಬ್ಬರೂ ಹಿರಿಯ ಹಿತ ಸಾಧಿಸದ ಸ್ವಾರ್ಥಿಗಳು.

**ಶಿಲ್ಪಿ:—** ನಿನ್ನನೂ ಕಾಡುತಿದೆ 'ದೇವತನ'ದಾ ಚಿಂತೆ

**ಅಮರ:—** ನನಗಿಲ್ಲ ಆ ಚಿಂತೆ. ಜಗದ ಚಿಂತೆಯು ಕಂಡು
ತಳಮಳಕ್ಕೀಡಾದೆ. ನೀನಾರು; ಏನೆಂಬೆ?

**ಶಿಲ್ಪಿ:—** ನಾ ಶಿಲ್ಪಿ, ಕೇಳ್ಗೆಳೆಯ—ಯುಗಯುಗದ ಮಾ ಶಿಲ್ಪಿ
ಜನಕೆ ಬೇಕಾದಂತೆ ದೇವರನು ನಿರ್ಮಿಸುವೆ.
ಹಿಂದೆ ಆರ್ಯರಿಗಿತ್ತೆ ಇಂದ್ರಯಮರೆಲ್ಲರನು,
ಐಗುಪ್ತರಿಗಿತ್ತೆ ಅಸ್ನಿಬಿಸು, ಕ್ರೈಪೂನ,
ಅಸೀರಿಯರಿಗಿತ್ತೆ ಹೆರವರೇ ಆದವರ,
ಅಂಥ ದೇವರ ಸೃಷ್ಟಿ ಸಾವಿರದಿ ಗೈದಿಹೆನು.

**ಅಮರ:—** ಅದೇಕೋ, ಅದೇನೋ—ಒಬ್ಬನೇ ನಾಲನೇ

**ಶಿಲ್ಪಿ:—** ನನ್ನಿಷ್ಟ ಅಲ್ಲಿಲ್ಲ; ಬಯಸುವರ ಬಯಕೆಗಳು
ನನ್ನ ಕರಗಳ ಕುಣಿಸಿ ಬಿಂಬಗಳ ಹೊಮ್ಮಿಸವು.
ಜನರ ಕಲ್ಪನೆ ಕೂಟ ಹೊಣೆಯದಕೆ, ನಾನಲ್ಲ

**ಅಮರ:—** ದಾಸ್ಯವದು ನಿನಗೇಕೆ? ನಿನಗೆ ಏತರ ತೃಪ್ತಿ?

**ಶಿಲ್ಪಿ:—** ಎಂತು ಬರುವುದು ತೃಪ್ತಿ, ದಾಸ್ಯವಿದು ನಿಜದಿ ನಿಜ
ತೃಪ್ತಿ ಬರುವಂತೊಮ್ಮೆ ಕೆತ್ತಲೆಣಿಸುವೆ ನಾನು.
ಜಗದ ಮನ ಉಚ್ಚತಮ ಪ್ರೇರಣೆಯನೀಯದೈ.
ಕೊನೆಯೊಂದು ಮೂರ್ತಿಯಲಿ ನನ್ನಾಸೆ ತಣಿವಂತೆ
ಶ್ರಮಿಸುವೆನೆ; ಬರಿಬಯಕೆ, ದೊರಕದಾ ಸ್ಫೂರ್ತಿ

**ಅಮರ:—** ಅಹುದಹುದು, ಸ್ಥಿರವಿಲ್ಲ ಮಾನವನ ಮನಸಿಂಗೆ.
ಸ್ವಾರ್ಥದಲಿ ಮುಳುಗಿರುವ ಆತನಿಂ ಸ್ಫೂರ್ತಿಯೇ?

**ಶಿಲ್ಪಿ—** ನೋಡವನ—ಬರುತಿಹನ.

[ಎಂದು ಆಗಮಿಸುತ್ತಿರುವ ಪೂಜಾರ್ಯನನ್ನು ತೋರಿಸುವನು]

**ಅಮರ**:— ನಾ ಬಲ್ಲೆ,—ಪೂಜಾರ್ಯನಲ್ಲವೇನು?
ಇಂದ್ರ ಯಮ, ಕಲಗುಂಡ, ಮಾದವ್ವ
ಎಲ್ಲರಿಗು ಸಮನಾಗಿ ಪೂಜಾರಿತನಗೈದ
ಅರ್ಚಕನು ಬಲ್ಲೆನದ; ಭಕುತರಿಗೆ ವಲ್ಲಾಳಿ.

**ಶಿಲ್ಪಿ**:— ನನಗದುವೆ ಅಚ್ಚರಿಯು—ದಲ್ಲಾಳಿತನ ಕಂಡು.
ಅವರವರ ಮನಸನ್ನೆ ಬಿಂಬಿಸುವ ದೇವರನು
ನೀಡುತಿರೆ, ನಾ ಜಗಕೆ, ಪೂಜಾರಿ ಇವನೇಕೆ?

**ಅಮರ**:— ಜಗಕೆ ತಮ್ಮಯ ಮನದ ಅರಿವೆ ಇಲ್ಲದೆಯಿರಲು
ತಮ್ಮ ಕಲ್ಪನೆಯೊಳ ತಮಗಾಗದಿರೆ, ಅಂದು,
ತಮ್ಮ ದೇವರ ಅರುಹು ಎಲ್ಲಿಂದ ಬಹುದಯ್ಯ?
[ಪೂಜಾರ್ಯನು ಏನನ್ನೋ ಅರಸುತ್ತಲಿರುವನು]

**ಅಮರ**:— ಪೂಜಾರ್ಯ, ಏನನೋ ಕಾಣದೆಯೆ ಅರಸುತಿಹೆ!

**ಶಿಲ್ಪಿ**— ಶಿಲ್ಪಿಯೊಬ್ಬನನರಸೆ ನಾಲ್ದೆಸೆಯ ಇಣಕುತಿಹೆ.
ಇದ್ದುದೆಲ್ಲವು ಹಳಸೆ—ಹೊಸದೇವನೇ ಬೇಕು.
ಅವನಾವನೋ ಒಮ್ಮೆ ಕನಕನನು ಕೆತ್ತಿದನು;
ಮೂರ್ತಿ ಬಲು ಕ್ರೂರಾಗೆ, ಇನ್ನೊಬ್ಬನನು ಇತ್ತ.
ಕಿವಿ ಕಣ್ಣು ಮೂಗುಗಳು ಇಲ್ಲದಿಹ ರಚನೆಯದು!
[ಅಬಲೆಯೂ ಅಲ್ಲಿಗೆ ಬರುವಳು]

**ಅಮರ**:— ಸೋದರಿಯೆ! ಎತ್ತ ನೀಂ ಸಾರಿದೆಯು—ಇಷ್ಟುದಿನ?
ನಿನಗಾಗಿ ಕಾದಿದ್ದೆ, ನಿನಗಾಗಿ ಅರಸಿದ್ದೆ.

**ಅಬಲೆ**:— ಪತಿಯುಗಳಿಸಲ್ಕೆಂದು ದೇವರರಸುತಲಿದ್ದೆ.
ದೇವನೊಳು ಮೊರಯಿಟ್ಟು ಬರಿದಾಯ್ತು ಅಭಿಮಾನ;
ಈಗೆನುವ ಪೂಜಾರಿ—ಇಂದ್ರಿಯವ ದಮನಿಸುತೆ
ತಪವನೆಸಗಲು ಆಗ ತಾ ನೊಲಿವನಂತೆ.

**ಪೂಜಾರಿ**:—ಅನುಮಾನವಿಷ್ಟಿಲ್ಲ; ದೊರಕುವನು; ಒಲಿಯುವನು.

**ಅಮರ**:— ಅಂತಿರಲು ಮರೆಯುವುದೆ ಪೂಜೆ ಸಾಮಗ್ರಿಗಳ?
ನೂರು ಹೊನ್ನಿನ ತುಣುಕು
ನೂರು ರಜತದ ಚೂರು

ನೂರು ನಿಕೆಲಿನ ಕಾಸು—
ನೂರು ತಾಮ್ರದ ಬಟ್ಟು

**ಪೂಜಾರಿ:**—ಗುರುವಿಂಗೆ ಅರ್ಪಿಸಲು, ಬರಿಯ ಕಾಣಿಕೆಗಳವು

**ಅಮರ:**— ಕನಕ ರಜತಗಳೆಲ್ಲ ಇಂದ್ರಿಯದ ವಸ್ತುಗಳು.
ಪೂಜಾರಿಗವು ಹಿತವು 'ಭಕುತರಿಗೆ ಒಗ್ಗವೇ?'

**ಪೂಜಾರಿ:**—ಪೂಜಾರಿಗಿಹ ಧರ್ಮ ಭಕುತನಿಗೆ ಸಲ್ಲದೈ
ಭಕುತನಿಗೆ ಸಲುವ ವಿಧಿ—ಪೂಜಾರಿಗಿಲ್ಲವೈ.

**ಅಮರ:**— ನಿಮ್ಮಿಬ್ಬರಿಗಿಹ ವಿಧಿಯು ದೇವನಿಗೆ ಅಲ್ಲವೈ!

**ಪೂಜಾರಿ:**—ಅದುವೆ ಅಣಕದ ಮಾತು; ವಿನಯ, ನೀತಿಯದಲ್ಲ;
ದೇವನೊಲಿಯುವುದಲ್ಲ; ಬದಲು ಶಾಪಕೆ ಹೇತು,

**ಅಮರ:**— ದೇವ ಕೊಡುವನೆ ಶಾಪ? ಅವನೊಳುಂಟೇ ಕೋಪ?

**ಪೂಜಾರಿ:**— ಜನಕೆ ತಕ್ಕಂತಿಹನು ದೇವನೆಂಬವನು.
ಕೆಲವೊಮ್ಮೆ ಕೋಪಿಯವ; ಕೆಲವೊಮ್ಮೆ ಕರುಣಿಯವ

**ಅಮರ:**— ಆರು ವೈರಿಗಳವನ ಕಾಡುವುದು ನಿಜವೇನು?
ನಿನ್ನ ನುಡಿ ನಿಜವಿರಲು, ಜನವೆ ದೇವರ ಕರ್ತೃ!

**ಪೂಜಾರಿ:**—ಮಾತಿನಲಿ ಜಾಣನಿಹೆ; ಮಾತೆ ನಿನ್ನಯ ಮೃತ್ಯು!
ಹರಟೆ ಕುಳಿತಿರಲೆನಗೆ ವ್ಯವಧಾನವಿನಿತಿಲ್ಲ
ಹೊಸ ದೇವನನು ಗಳಿಸಿ ಜನದ ಮನ ಸೆಳೆಯುತ್ತಿ
ಮುಕ್ತಿದರ್ಶನ ಜಗಕೆ ಗೈಯ್ಯಬೇಕೆನಗೆ.
ಅಂಥ ದೇವನ ರೂಪ, ನಿರ್ಮಿಸುವ ಋಷಿ ಬೇಕು

(ಶಿಲ್ಪಿಯನ್ನು ಕಂಡು)

ನೀನಾರು? ಎಲ್ಲೇನೋ ಕಂಡಂತೆ ಕಾಣುತಿದೆ

**ಶಿಲ್ಪಿ.**— ನನ್ನನ್ನೆ ಕಂಡಿಹೆಯ, ನಿನ್ನಲ್ಲೆ ಇರಬೇಕು.

**ಪೂಜಾರಿ:**—ಗುಡಿಯೊಳಗೆ ಕಂಡಿಹನೆ; ನನ್ನದೇ ಗುಡಿಯೊಳಗೆ!

**ಶಿಲ್ಪಿ:**— ಅದುವೆ ನಿಜವಿಹುದಯ್ಯ; ಅಂದು ಕನಕನನಿತ್ತು
ನಿನ್ನ ಗುಡಿ ತುಂಬಿಸಿದ ಬೆರಗಿನವ ನಾನೇಯೆ.

**ಪೂಜಾರಿ:**—ಕನಕವರ್ಷಣಕೇತುವಿತ್ತವನು ನೀನೇನು!
ಬಲು ಚತುರ ನೀ ಶಿಲ್ಪಿ! ಶಿಲ್ಪಿಯೇ! ನೀ ಬೊಮ್ಮ!

ಸಾಷ್ಟಾಂಗ ನಮಿಸುವೆನು— ಇನ್ನೊಮ್ಮೆ ಒಲಿಯಲ್ಕೆ.
(ಉದ್ದಂಡ ನಮಿಸಿ)
ಆ ನಿನ್ನ ಶಿಲ್ಪಕೃತಿ ಅತ್ಯುಗ್ರವೆನಬೇಕು!
ದೇವನೆಂಬವನವಗೆ ಉಗ್ರತನ ಬೇಕಹುದು;
ಅತಿಘೋರತನವಲ್ಲ; ಸೌಮ್ಯತೆಯು ಅತಿಯಾಗೆ
ಜನಕೆ ಲಕ್ಷ್ಯವೆ ಇಲ್ಲ—ಉಗ್ರನೇ ಇರಬೇಕು.
ಅತ್ಯುಗ್ರತನದಿಂದ ನನಗಪ್ಪುದಂಜಿಕೆಯು
ನನ್ನುಳಿದು, ಜಗವನ್ನು ಬೆದರಿಸುವ ಭೀಕರತೆ
ಇದ್ದುದಾದೊಡೆ ಕೃತಿಯು—ಒಪ್ಪುವುದು; ಅಪ್ಪುವುದು.

**ಶಿಲ್ಪಿ:—** ನಿನಗಾಗಿ ದೇವನೇ? ಜಗಕಾಗಿ ಬೇಡವೇ!

**ಪೂಜಾರಿ:—** ಜಗಕೆ ತೋರಿಸಲವನ ನಾನೆ ನಿಂದಿಹೆನಲ್ಲ;
ಇಂದ್ರ ಯಮರೆಲ್ಲರನು ಜಗಕೆ ಸಾರಿದರಾರು?

**ಶಿಲ್ಪಿ:—** ಅಂಥವನು ನೀನಿಹೆಯು, ಬಲು ಹಿರಿಯರೊಳು ಹಿರಿಯ.
ನೀ ಪೂಜೆವಿಧಿಯನು ಅರುಹೆ, ಮೂರ್ತಿಯನು ಕೆತ್ತುವೆನು.

**ಪೂಜಾರಿ:—** ಹಣ್ಣುಕಾಯಿಗಳೆಲ್ಲ ಹಳೆಯದಿನಗಳಿಗಾಯ್ತು
ಮಾಂಸರಕ್ತದ ಪೂಜೆ ಅಸಭ್ಯತನವಾಯ್ತು;
ಕನಕ ರಜತದ ಬೆಲೆಗೆ ಇಳಿದಿನವು ಪ್ರಾಪ್ತಿಸಿತು;
ಇಂತಿರಲು ಬೇಕದಕೆ ಬೇರೆಯೋ ಪೂಜೆಗಳು.
ಏನೆನಲಿ? ಯಾವುದೆನೆ? ಇಂದ್ರಿಯವನೊಪ್ಪಿಸುವ
ಪೊಸ ಪೂಜೆಯನು ಪೇಳ್ವೆ—ಆಗದೇ? ಸಾಗದೇ?

**ಶಿಲ್ಪಿ:—** ಕೇಳಲೆನಗಾತುರವು?

**ಪೂಜಾರಿ:—** ಭಕ್ತಕೋಟಿಯು ನಿಂತು ತಮ್ಮ ಕಾಯಗಳನ್ನು
ಪೂಜಾರ್ಯಗೊಪ್ಪಿಸುತೆ ಶರಣೆಂಬುದೇ ರೀತಿ.
ಅದರಿಂದಲಾ ಜನರು ಇಂದ್ರಿಯವ ತೊರೆದಂತೆ,
ಭಕ್ತಿಯಿಂ ಮಣಿದಂತೆ—ಆಗಲಿಲ್ಲವೆ ಹೇಳು.

**ಶಿಲ್ಪಿ:—** ನೀನಾಗಲೇಂ ಗೈವೆ?

**ಪೂಜಾರಿ:—** ಭಕ್ತರಿತ್ತುದನೆಲ್ಲ ಮಮತೆಯಿಂ ಸ್ವೀಕರಿಸಿ,
ದೇವನೊಳು ಬಿನ್ನೈಸಿ ಇಷ್ಟಾರ್ಥ ಕೊಡಿಸುವೆನು.

**ಶಿಲ್ಪಿ:—** ಆಗಲಾಗಲಿ—ಇರಲಿ, ಕೊನೆಯೊಮ್ಮೆ ಯತ್ನಿಪೆನು.
ಕರೆ ನಿನ್ನ ಭಕುತರನು, ಕರೆದು ನೀನಿಂತೆನ್ನು
"ನಿಮ್ಮ ಕಾಯುವನಿಲ್ಲಿ ನನಗಾಗಿ ಒಪ್ಪಿಸಿರಿ"

**ಪೂಜಾರಿ:—**ಆ ದೇವರೆಲ್ಲಿ?

**ಶಿಲ್ಪಿ:—** ನಿನ್ನ ಬೆನ್ನಿನ ಹಿಂದೆ, ನೋಡು ಹಿರಿಯಾಕೃತಿಯು

[ಶಿಲ್ಪಿಯ ಚಮತ್ಕೃತಿಯಿಂದ ಅವನ ಬೆಂಗಡೆಯಲ್ಲಿ ದೊಡ್ಡ ಪಾದಗಳೆರಡು ಕಾಣಿಸುವುವು]

ಕಾಣುತಿದೆ ಪದಯುಗವು, ಭಕುತಿ ಸಲಿಸಲು ಜನರು,
ಉಳಿದ ರೂಪವು ಬಂದು ಕಣ್ಮುಂದೆ ನಿಲ್ಲುವುದು

**ಪೂಜಾರಿ:—**ಓ ಆರ್ತ ಜನಕೋಟಿ; ಮುಂದೆ ಬನ್ನಿರಿ ಬೇಗ
ಎಲ್ಲ ದೇವರದೇವ ಕರೆಯುವನು ನಿಮ್ಮಗಳ,
ಎಲ್ಲರಿಷ್ಟಾರ್ಥಗಳ ಸಲಿಸಲಿಕೆ ಐತಂದ

[ಜನರು ಕಾಣಿಸಿಕೊಳ್ಳುವರು. ಅವರ ಕೂಟ ಬೆಳೆಯುವುದು]

**ಜನರು:—** ಪೂಜಾರ್ಯ ಬಂದಿಹೆವು, ಆತುರದಿ ನಿಂದಿಹೆವು

**೧ನೆಯವ.-** ಪೂಜೆ ಸಲಿಸದೆ ನಾನು ಶತಮಾನವೊಂದಾಯ್ತು

**೨ನೆಯವ:-** ಬಯಕೆಯೆಲ್ಲವ ನೀಡಿ ಕಾಯುವವನಿಲ್ಲಾಯ್ತು.

**ಪೂಜಾರಿ:—**ಈ ದೇವನಂತಲ್ಲ, ಇವನು ನೀಡದುದಿಲ್ಲ
ನಿಮ್ಮ ಭಕ್ತಿಯ ಆಳದಂತೆಸವ ಕಂಗಳಿಗೆ
ಅವ ಸಲಿಸದಿಹ ಬದುಕು ಇಳೆಯೊಳೇ ಇರದಿರದು.
ಬೇಡುವುದ ಬೇಡುತಲಿ—ಬಾಯ್ಬಿಟ್ಟು ನುಡಿಯುತಿರಿ
"ಪಂಚೇಂದ್ರಿಯಗಳೆಮ್ಮ ವಿನಯದಾ ಕಾಣಿಕೆಯು"

**ಜನರು:—** "ಪಂಚೇಂದ್ರಿಯಗಳೆಮ್ಮ ವಿನಯದಾ ಕಾಣಿಕೆಯು"

[ಹೀಗೆಂದು ಒಬ್ಬೊಬ್ಬರೇ ಕೂಗಿ ಹೇಳುವರು]

**೧ನೆಯವ:-** ನಾ ಸಲಿಪೆ ಅವುಗಳನು.

**೨ನೆಯವ:-** ಒಪ್ಪಿಸಿದೆ ಎಲ್ಲವನು

**೩ನೆಯವ:-** ನಿನಗಾಗಿ ಅವುಗಳನು.

[ಹೇಳುತ್ತಲೆ ಅವರೆಲ್ಲರು ಶವವಾಗಿ ಮಲಗುವರು]

**ಪೂಜಾರಿ:**— ಓ ಶಿಲ್ಪಿ, ಓ ಶಿಲ್ಪಿ—ಏನಿದಚ್ಚರಿಯಾಟ
ಪೂಜೆಯಾ ವಿಧಿಯೇನು! ಈ ಹೆಣನ ರಾಶಿಯೇನ್!
ಇಂದ್ರಿಯವ ತೊಡೆದವರು ಕಾಯವನೆ ಬಿಟ್ಟಿಹರು!

**ಶಿಲ್ಪಿ:**— ನಾನರಿಯೆ ಅದನೆಲ್ಲ, 'ಇಂದ್ರಿಯವ ಅರ್ಪಿಸಲು
ಆಜ್ಞೆಯಿತ್ತವರಾರು'? ಅದರಿಂದೆ ಮಡಿದಿಹರು.
ಇಂದ್ರಿಯದಿಂದನುಭವವು, ಅದರಿಂದೆ ಮನವುಂಟು.
ಮನಸು ವಿಕಸನಗೊಂಡು ಬಾಳ್ವೆ ಹೂ ಅರಳುವುದು;
ಸವಿ, ಬಣ್ಣಗಳ ಹೊತ್ತು ಇಳೆಗೆ ಸೊಗವಾಗುವುದು.
ಮನಕೆ ಪುಟವಿಟ್ಟುದರಿಂದ ಬುದ್ಧಿಯಾತ್ಮಗಳುಂಟು;
ಬುಡಕಾದೆ ನೀಕೊಡಲಿ—ಬಾಳಿಗೀ ಗತಿಬಂತು.

**ಪೂಜಾರಿ:**—ಓ ಶಿಲ್ಪಿ, ಕರುಣೆತೋರು; ಬದುಕಿಸೈ ಸತ್ತವರ.
ಇಂದ್ರಿಯವ ಬಿಟ್ಟವರು ಉಳಿದರೂ ತಾನೊಂದೆ
ಅಳಿದರೂ ತಾನೊಂದೆ; ಬದುಕಿಸೈ ನೀನವರ,

**ಶಿಲ್ಪಿ:**— ನನ್ನ ಕೇಳುವೆಯೇಕೆ; ನಿನ್ನ ಮನದಂತಾಯ್ತು!
ಸ್ಫೂರ್ತಿಗೊಂಬವ ನಾನು; ನೀ ಸ್ಫೂರ್ತಿಯಿತ್ತವನು.
ನೀನೆ ಬದಲಿಸಬೇಕು—ನಾ ಬದಲುಗೊಳ್ಳಲ್ಕೆ.

**ಪೂಜಾರಿ:**—ಬೇರೆ ದೇವರ ಕೊಡಿಸು, ಬೇರೆ ಪೂಜೆಯ ತಿಳಿಸು.

**ಶಿಲ್ಪಿ:**— ಅಂತಿರಲು ನೀ ತಿರುಗು, ನಿನ್ನನೋಟದ ಪಥವೆ
ದಿಸೆಯ ಬದಲಿಸಬೇಕು—ಆಗ ನವದರ್ಶನವು.

[ಪೂಜಾರ್ಯ ತಿರುಗುವನು; ಅವನ ಎದುರಿಗೆ ದೇವ ಪೀಠದ ಮೇಲೆ ಅಮರನೇ ನಿಂತು ಎಸಗುತ್ತಾನೆ. ಅವನ ಕೈಗಳು ಉಳಿದವರನ್ನೆತ್ತಲು ಸನ್ನೆ ಮಾಡುತ್ತಿವೆ.]

**ಅಮರ:**— ಬೇರೆ ದೇವರು ಯಾರು?
ನಾನಿಹೆನು ಆ ದೇವ—
ಮಾನವನೆ ಆ ದೇವ
ದೈವತ್ವವೆಂಬುದದು ಜೀವನವು ತಾನಾಗಿ
ಎಲ್ಲರಲಿ ಹರಿಯುತಿದೆ ಅದನೆಲ್ಲರರಿಯುವುದು.
ಅದನು ತಿಳಿಯಲು ಬೇಕು ಇಂದ್ರಿಯದ ಸೂಕ್ಷ್ಮತೆಯು.

ದೇವ ಬದುಕಿರಲವಗೆ ಸಾವಿನಾ ಪೂಜೆಯೇನ್?
ಸಾಧನವೆ ಇಂದ್ರಿಯವು ಜನ್ಮನೀಡಿದುದೆಮಗೆ;
ಬಾಳತಿಳಿಯಲಿಕೆಂದು--ತಿಳಿವಿಗದು ತಡೆಯೇನು?
ತನ್ನ ಜೀವನ ತಾನು ತಿಳಿಯುವುದೆ ದೈವತ್ವ;
ಇಂತಿರಲು ನಡುವೇಕೆ ಪೂಜಾರಿ ಕೃತಿಮತ್ವ!

**ಪೂಜಾರಿ:**— ಇಂತಿರಲು ನಡುವೇಕೆ ಪೂಜಾರಿ ಕೃತಿಮತ್ವ!

**ಅಮರ:**— ನಾವೆ ದೇವರೆ ಇರಲು ನಿನಗೆ ತಾಣವದೆಲ್ಲಿ?
ಜೀವಕೋಟಿಯೆ ತಾನು ದೇವನಾಗಿಹುದು.

**೨ನೇಯುವ:**-ನಾವೆ ದೇವರು ಏನು?

**ಅಮರ:**— ಜಗವೆ ದೇವರು ಎಂದೆ; ಜೀವ ಕೋಟಿಯು ಅದುವೆ.
ಜಗವ ಬಿಟ್ಟಿಲ್ಲ ನಾವ್, ನಮ್ಮ ಬಿಟ್ಟಿಲ್ಲ ಜಗ.

**೨ನೇಯುವ:**-ಹೀಗಿರಲು ಪೂಜೆಯೋ? ಆರತಿಯೋ? ಕಾಣಿಕೆಯೋ?

**ಪೂಜಾರಿ:**—ಅಹುದಹುದು ಅದನುಸುರು; ಪೂಜೆ ಯಾರಿಗೆ ಸಲಲಿ?
ಭಕುತಿ ಎಂಬುದು ಏಕೆ; ಕರ್ಮವೆಲ್ಲಿಯ ತನಕ?
ಜ್ಞಾನ ಸಾಧನೆ ಎಂತು; ಮೋಕ್ಷ ಸಿದ್ಧಿಯು ಎಂದು?

**ಅಮರ:**— ಅವು ಬರಿಯ ಶಬ್ದಗಳು; ಭ್ರಮೆಯುಡ್ಡ ಹಾದಿಗಳು.
ಜಗವೆ ದೇವರದಾಗೆ ಬಾಳ್ವೆಯೇ ನಿಜಪೂಜೆ.
ಜಗದ ಜೀವನ ಶ್ರುತಿಗೆ ನಮ್ಮ ದನಿಗೂಡಿಸುತೆ
ಅದರ ಗತಿಯನು ಅರಿತು, ನಮ್ಮ ಪದಯುಗ ನಡೆಸಿ
ಸಾಗುವುದೆ ಸಾಧನವು; ಅದುವೆ ಗುರಿಯು.

**ಪೂಜಾರಿ:**— ತಾವೆ ದೇವರು ಎಂಬ ಮರುಳು ಜನಗಳ ಪಿಡಿಯೆ
ನನಗಿಲ್ಲಿಯದು ತಾವು; ಪೂಜೆಗಾಯಿತು ಸಾವು.

**ಶಿಲ್ಪಿ:**— ನಮ್ಮ ಕಾಲವು ಒದಗೆ, ಸಾಯುವುದೆ ನಿಜಮುಕ್ತಿ;
ನಿನಗು ಇಲ್ಲವು ತಾವು; ನನಗು ಇಲ್ಲವು ನಿಲುವು.
ಮನಸು ಜಗವನು ಕವಿಯೆ
ಪೂಜೆ ಬಾಳ್ವೆಯ ಕವಿಯೆ

ದೇವ ಜಗಪೂಜೆಗಳು ಒಂದಾಪವು
ಆ ದಿನವು ಬರಲಾಗಿ—ನಿನಗೆ ಪ್ರಾಪ್ತವು ಸೋಲು
ನನಗಿಲ್ಲ ಹೆಂಬಲವು.
ನಮ್ಮ ಜೀವನ ಬೆಳೆದು, ವಿಶ್ವಜೀವದಿ ಬೆರೆಯೆ
ದೈವತ್ವ ನಮ್ಮಲ್ಲಿ ಬೆಳಗಿ ಹರಡುವುದು;
ಜಗದ ವಿಸ್ತರಣದಿಂ ನಮ್ಮ ಜೀವವ ಸೆಳೆಯೆ,
ಬದುಕು, ದೈವತ್ವಗಳು ನಗಚಾಟವು!



Printed at Harsha Printery, Puttur.
S. K. P. I. C. No. 51. December 1946. 1000.